KA / BG-GPO/2515/WPP-47/2006-2008

ಸುವರ್ಣ ಕರ್ನಾಟಕ - 2006



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೧ | ಬೆಂಗಳೂರು, ಗುರುವಾರ, ಜನವರಿ ೧೯, ೨೦೦೬ ( ಪುಷ್ಯ ೨೯, ಶಕ ವರ್ಷ ೧೯೨೭) | ಸಂಚಿಕೆ ೩ |
|---|---|---|

## ಭಾಗ - ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು**

**ನಂ: ಎಲ್.ಎನ್.ಡಿ (ಎನ್) ಸಿ.ಆರ್ : 53/ 05-06, ದಿನಾಂಕ: 23ನೇ ನವೆಂಬರ್ 2005.**

**ಅಧಿಕೃತ ಜ್ಞಾಪನ ಪತ್ರ**

**ವಿಷಯ:** ಬೆಂಗಳೂರು ಉತ್ತರ ತಾಲ್ಲೂಕು ಯಶವಂತಪುರ ಹೋಬಳಿ, ಚಿಕ್ಕಬಾಣವಾರ ಗ್ರಾಮದ ಸ.ನಂ. 192 ರಲ್ಲಿ 0.28 ಗುಂಟೆ ವಿಸ್ತೀರ್ಣದ ಜಮೀನನ್ನು ಸಾರ್ವಜನಿಕ ಉದ್ದೇಶದ ಸ್ಮಶಾನಕ್ಕೆ ಕಾಯ್ದಿರಿಸುವ ಬಗ್ಗೆ.

**ಉಲ್ಲೇಖ:** ತಹಶೀಲ್ದಾರ್, ಬೆಂಗಳೂರು ಉತ್ತರ ತಾಲ್ಲೂಕು ರವರ ಪತ್ರದ ಸಂಖ್ಯೆ: ಎಲ್.ಎನ್.ಡಿ:ಸಿ.ಆರ್ : 74 / 05-06, ದಿನಾಂಕ: 30.08.2005.

ಬ್ರಾಹ್ಮಣ ಸಂಘ, ಟಿ. ದಾಸರಹಳ್ಳಿ (ರಿ) ರವರು ದಿನಾಂಕ: 13.6.2005 ರಂದು ಮನವಿ ಸಲ್ಲಿಸಿ ಬೆಂಗಳೂರು ಉತ್ತರ ತಾಲ್ಲೂಕು, ಯಶವಂತಪುರ ಹೋಬಳಿ, ಚಿಕ್ಕಬಾಣಾವಾರ ಸ.ನಂ. 192 ರಲ್ಲಿ 0.28 ಗುಂಟೆ ಜಮೀನನ್ನು ಎಲ್ಲಾ ಮತದವರಿಗೆ ಅನುಕೂಲವಾಗುವಂತೆ ಸ್ಮಶಾನಕ್ಕೆ ಕಾಯ್ದಿರಿಸಬೇಕೆಂದು ಕೋರಿರುತ್ತಾರೆ.

ಸದರಿ ಮನವಿಯಲ್ಲಿನ ವಿಷಯಕ್ಕೆ ಸಂಬಂಧಿಸಿದಂತೆ ತಹಶೀಲ್ದಾರ್, ಬೆಂಗಳೂರು ಉತ್ತರ ತಾಲ್ಲೂಕು ರವರು ಉಲ್ಲೇಖದ ಪತ್ರದಲ್ಲಿ ವರದಿ ನೀಡಿದ್ದು, ಚಿಕ್ಕಬಾಣಾವಾರ ಗ್ರಾಮದ ಸ.ನಂ. 192 ರಲ್ಲಿ 0.28 ಗುಂಟೆ ಜಮೀನು ಈಗಾಗಲೇ ಸ್ಮಶಾನಕ್ಕಾಗಿ ಉಪಯೋಗಿಸಲಾಗುತ್ತಿದ್ದು, ಬ್ರಾಹ್ಮಣ ಸಮುದಾಯ ಮತ್ತು ಸುತ್ತಮುತ್ತಲ ಗ್ರಾಮದ ಎಲ್ಲಾ ಜನಾಂಗದ ದಹನ ಕ್ರಿಯೆಗೆ ಅನುಕೂಲವಾಗುವಂತೆ ಕಾಯ್ದಿರಿಸಲು ಮತ್ತು ಜಮೀನನ್ನು ಅಕ್ಕಪಕ್ಕದವರಿಂದ ಒತ್ತುವರಿಯನ್ನು ತಡೆಗಟ್ಟಲು ಉಸ್ತುವಾರಿಯನ್ನು ಬ್ರಾಹ್ಮಣ ಸಂಘ ಟಿ. ದಾಸರಹಳ್ಳಿ (ರಿ) ರವರಿಗೆ ವಹಿಸಲು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಅದರಂತೆ ಈ ಕೆಳಕಂಡಂತೆ ಆದೇಶ ನೀಡಲಾಗಿದೆ.

**ಆದೇಶ**

ತಹಶೀಲ್ದಾರ್, ಬೆಂಗಳೂರು ಉತ್ತರ ತಾಲ್ಲೂಕು ರವರ ಉಲ್ಲೇಖದ ಪ್ರಸ್ತಾವನೆಯನ್ನು ಪರಿಶೀಲಿಸಿ ಬೆಂಗಳೂರು ಉತ್ತರ ತಾಲ್ಲೂಕು, ಯಶವಂತಪುರ ಹೋಬಳಿ, ಚಿಕ್ಕಬಾಣವಾರ ಗ್ರಾಮ ಸ.ನಂ. 192 ರಲ್ಲಿ 0.28 ಗುಂಟೆ ವಿಸ್ತೀರ್ಣದ ಜಮೀನನ್ನು ಕರ್ನಾಟಕ ಭೂ ಕಂದಾಯ ಕಾಯ್ದೆ 1964 ರ ಕಲಂ 71 ರಡಿ ಸುತ್ತಮುತ್ತಲ ಗ್ರಾಮದ ಎಲ್ಲಾ ಜನಾಂಗದ ದಹನ ಕ್ರಿಯೆಗೆ ಕಾಯ್ದಿರಿಸಿದೆ. ಹಾಗೂ ಸದರಿ ಜಮೀನಿನ ಒತ್ತುವರಿಯನ್ನು ತಡೆಗಟ್ಟಲು ಉಸ್ತುವಾರಿಯನ್ನು ನೋಡಿಕೊಳ್ಳಲು ಬ್ರಾಹ್ಮಣ ಸಂಘ ಟಿ. ದಾಸರಹಳ್ಳಿ (ರಿ) ಇವರಿಗೆ ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಆದೇಶಿಸಿದೆ.

**ಷರತ್ತುಗಳು**

1) ಅರ್ಜಿತ ಸಂಸ್ಥೆಗೆ ಜಮೀನಿನ ಮೇಲೆ ಯಾವುದೇ ಹಕ್ಕು ಇರುವುದಿಲ್ಲ.
2) ಸ್ಮಶಾನದಲ್ಲಿ ಯಾವುದೇ ಕಟ್ಟಡ ಅಥವಾ ಇತರೆ ಯಾವುದಾದರೂ ಕಾರ್ಯವನ್ನು ನಿರ್ವಹಿಸಬೇಕಾದಲ್ಲಿ ತಹಶೀಲ್ದಾರ್ ರವರ ಪೂರ್ವಾನುಮತಿ ಪಡೆದು ನಿರ್ವಹಿಸತಕ್ಕದ್ದು.
3) ಸದರಿ ಸ್ಮಶಾನವನ್ನು ಸುತ್ತಮುತ್ತಲ ಗ್ರಾಮದ ಎಲ್ಲಾ ಜನಾಂಗದ ದಹನ ಕ್ರಿಯೆಗೆ ಉಪಯೋಗಿಸಬೇಕು.
4) ಮೇಲ್ಕಂಡ ಷರತ್ತುಗಳನ್ನು ಉಲ್ಲಂಘಿಸಿದಲ್ಲಿ ಸದರಿ ಆದೇಶವನ್ನು ರದ್ದುಪಡಿಸಲಾಗುವುದು.

ವಿಶೇಷ ಜಿಲ್ಲಾಧಿಕಾರಿಗಳು,
ಬೆಂಗಳೂರು ಜಿಲ್ಲೆ, ಬೆಂಗಳೂರು.

ಪಿ.ಆರ್. 1918

**ಮಾನ್ಯ 2ನೇ ಎಸಿಎಮ್‌ಎಮ್ ನ್ಯಾಯಾಲಯ ಸನ್ನಿಧಾನಕ್ಕೆ, ಬೆಂಗಳೂರು ನಗರ**

**ವಿಷಯ:** ಬನಶಂಕರಿ ಪೊಲೀಸ್‌ಠಾಣೆಯಲ್ಲಿ ವಾರಸುದಾರರಿಲ್ಲದೆ ವಶಪಡಿಸಿಕೊಂಡಿರುವ ಮಾಲುಗಳ ವಾರಸುದಾರರ ಪತ್ತೆಗಾಗಿ ಪ್ರಕಟಣೆ.

ಮೇಲ್ಕಂಡ ವಿಷಯಕ್ಕೆ ಘನ ನ್ಯಾಯಾಲಯದಲ್ಲಿ ಘನ ನ್ಯಾಯಾಲಯದಲ್ಲಿ ನಿವೇದಿಸಿಕೊಳ್ಳುವುದೇನೆಂದರೆ ಬನಶಂಕರಿ ಪೊಲೀಸ್‌ಠಾಣೆಯಲ್ಲಿ 2001-2005 ರವರೆಗೆ ವಾರಸುದಾರರಿಲ್ಲದೆ ವಶಪಡಿಸಿಕೊಂಡಿರುವ ಸ್ವತ್ತುಗಳ ಪಟ್ಟಿಯನ್ನು ಇದರೊಂದಿಗೆ ಲಗತ್ತಿಸಿರುತ್ತೆ. ಸದರಿ ವಾಹನಗಳ ವಾರಸುದಾರರನ್ನು ಪತ್ತೆಹಚ್ಚುವ ಸಲುವಾಗಿ ಬೆಂಗಳೂರು ನಗರದ ಎಲ್ಲಾ ಪೊಲೀಸ್‌ಠಾಣೆಗಳಿಗೆ ಸುತ್ತೋಲೆಯನ್ನು ಕಳುಹಿಸಿದ್ದು ಸದರಿ ವಾಹನಗಳ ವಾರಸುದಾರರು ಪತ್ತೆಯಾಗಿರುವುದಿಲ್ಲ. ಈ ವಾಹನಗಳು ಬಹಳ ಕಾಲದಿಂದ ಪೊಲೀಸ್‌ಠಾಣೆಯ ಆವರಣದಲ್ಲಿದ್ದು ವಿಲೇವಾರಿಯಾಗದೇ ಉಳಿದಿರುತ್ತೆ. ಆದ್ದರಿಂದ ಸದರಿ ವಾಹನಗಳ ವಾರಸುದಾರರನ್ನು ಪತ್ತೆಹಚ್ಚುವ ಸಲುವಾಗಿ ವಾಹನಗಳ ವಿವರಗಳನ್ನು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಲು ಆದೇಶ ನೀಡಬೇಕೆಂದು ಘನ ನ್ಯಾಯಾಲಯದಲ್ಲಿ ಮನವಿ ಮಾಡಿಕೊಂಡಿರುತ್ತೆ.

| Sl. No. | 'C' Mise / Cr. No. | PF No. | Descriptions of properties |
|---|---|---|---|
| 1 | 98/01 | 196/01 | Scooter No. CAW - 5523 |
| 2 | 404/02 | 108/02 | TVS XL No. CAU - 6096 |
| 3 | 510/03 | 166/03 | TVS XL No. KA-01 R-5485 |
| 4 | 727/03 | 253/03 | RX Yamaha No. KA-05 X-8257 |
| 5 | 608/03 | 47/04 | Maruthi Van No. TN-29 Q-2347 |
| 6 | NCR No. 441/04 | 121/04 | LML Vespa No. CAX-1821 |
| 7 | 393/04 | 145/04 | Suzuki Samurai No. KA-05 E-5778 |
| 8 | 603/04 | 42/04 | RX Yamaha No. KA-05 Y-9258 |
| 9 | 372/05 | 135/05 | Bajaj Scooter No. CAI-2609 |
| 10 | NCR No. 91/05 | 45/05 | Suzuki Fiero No. KA-03 EC-9973 |

ದಿನಾಂಕ:- 26.10.2005.

Police Inspector
Banashankeri Police Station, Bangalore City.

P.R. 1919

**ಪೊಲೀಸ್ ಇಲಾಖೆ**

**ಪೊಲೀಸ್ ಕಮೀಷನರ್‌ರವರ ಕಛೇರಿ, ನಂ. 1, ಇನ್‌ಫೆಂಟ್ರಿ ರಸ್ತೆ, ಬೆಂಗಳೂರು ನಗರ**

**ಸಂಖ್ಯೆ: 22 / ಡಿಸಿಪಿ / ಸಂ.ಪೂ / 2005, ದಿನಾಂಕ: 22ನೇ ನವೆಂಬರ್ 2005.**

**ಅಧಿಸೂಚನೆ**

ಬೆಂಗಳೂರು ನಗರ ಅಶೋಕನಗರ ಸಂಚಾರ ಪೊಲೀಸ್ ಠಾಣೆಯ ವ್ಯಾಪ್ತಿಯಲ್ಲಿರುವ ಸಿ.ಡಿ. ಡಿಸೋಜ ರಸ್ತೆಯಲ್ಲಿ ದ್ವಿಮುಖ ಸಂಚಾರ ವ್ಯವಸ್ಥೆ ಇರುತ್ತದೆ. ಈ ರಸ್ತೆಯಲ್ಲಿ ವಾಹನ ಚಾಲಕರು ಅಡ್ಡಾದಿಡ್ಡಿಯಾಗಿ ವಾಹನಗಳನ್ನು ನಿಲ್ಲಿಸಿಕೊಳ್ಳುವುದರಿಂದ ವಾಹನಗಳ ಹಾಗೂ ಪಾದಚಾರಿಗಳ ಸುಗಮ ಸಂಚಾರಕ್ಕೆ ಅಡಚಣೆ ಉಂಟಾಗುತ್ತಿದೆ. ಈ ರಸ್ತೆಯಲ್ಲಿ ರೆಸಿಡೆನ್ಸಿ ರಸ್ತೆಯಿಂದ ಸಂಯುಕ್ತ ಕರ್ನಾಟಕ ಕಛೇರಿ ಗೇಟ್ ವರೆಗೆ ರಸ್ತೆಯ ಪಶ್ಚಿಮದ ಕಡೆಗೆ ಮತ್ತು ಮನೆ ನಂ. 7 ರಿಂದ ಹೇಯ್ಸ್ ರಸ್ತೆಯವರೆಗೆ ಉತ್ತರದ ಕಡೆಗೆ ಪ್ಯಾರಲಲ್ ಪಾರ್ಕಿಂಗ್ ವ್ಯವಸ್ಥೆ ಮಾಡಿ ಸಾರ್ವಜನಿಕರ ಸುಗಮ ಸಂಚಾರಕ್ಕೆ ಅನುವು ಮಾಡಿಕೊಡುವುದು ಅವಶ್ಯಕವಾಗಿರುತ್ತೆ.

ಹಾಗೆಯೇ ಶಾಂತಿನಗರದ ಶಾಂತಿ ಅಡ್ಡ ರಸ್ತೆಯೂ, ಆಂಡ್ರಿ ರಸ್ತೆ ಮತ್ತು ಶಾಂತಿ ರಸ್ತೆ ಜಂಕ್ಷನ್‌ನ ಉತ್ತರದ ಕಡೆಗೆ ಉತ್ತರ ದಕ್ಷಿಣವಾಗಿ ಸುಮಾರು 15 ಅಡಿ ಅಗಲವಾಗಿ ಸುಮಾರು 150 ಅಡಿ ಉದ್ದವಾಗಿ ಹರಿದಿರುತ್ತೆ. ರಸ್ತೆಯ ಪೂರ್ವದ ಮತ್ತು ಉತ್ತರದ ಕಡೆಗೆ ವಾಸದ ಮನೆಗಳು ಮತ್ತು ಕಛೇರಿಗಳಿದ್ದು ರಸ್ತೆಯಲ್ಲಿ ಅಡ್ಡಾದಿಡ್ಡಿ ವಾಹನ ನಿಲುಗಡೆಯಿಂದ ಮತ್ತು ರಸ್ತೆ ಕಿರಿದಾಗಿರುವುದರಿಂದ ವಾಹನಗಳ ಮತ್ತು ಸಾರ್ವಜನಿಕರ ಸಂಚಾರಕ್ಕೆ ತೊಂದರೆ ಉಂಟಾಗುತ್ತಿದೆ. ಈ ರಸ್ತೆಯ ಪಶ್ಚಿಮದ ಕಡೆಗೆ ಖಾಲಿ ಜಾಗ ಮತ್ತು ಒಂದೇ ಒಂದು ಮನೆ ಇರುವುದರಿಂದ ಮನೆಯ ಗೇಟ್‌ನ ಉಭಯ ಕಡೆಗೆ 10 ಅಡಿ ಮಾತ್ರ ವಾಹನ ನಿಲುಗಡೆ ನಿಷೇಧಿಸಿ ರಸ್ತೆಯ ಪಶ್ಚಿಮದ ಕಡೆಗೆ ವಾಹನ ನಿಲುಗಡೆಗೆ ಅವಕಾಶ ಕಲ್ಪಿಸಿ ಸಾರ್ವಜನಿಕರ ಸುಗಮ ಸಂಚಾರಕ್ಕೆ ಅನುವು ಮಾಡಿಕೊಡುವುದು ಅವಶ್ಯಕವಾಗಿರುತ್ತದೆ.

ಆದ್ದರಿಂದ ಕಲಂ 115 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 3 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960 ರ ಪ್ರಕಾರ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಡಾ: ಅಜಯಕುಮಾರ ಸಿಂಹ, ಐ.ಪಿ.ಎಸ್. ಪೊಲೀಸ್ ಕಮೀಷನರ್, ಬೆಂಗಳೂರು ನಗರ ಆದ ನಾನು ಈ ಕೆಳಕಂಡಂತೆ ಸಂಚಾರ ನಿರ್ಬಂಧೆಗಳನ್ನು ಆದೇಶಿಸಿರುತ್ತೇನೆ.

**ಸಿ.ಡಿ. ಡಿಸೋಜ ರಸ್ತೆ:** ಸಿ.ಡಿ. ಡಿಸೋಜ ರಸ್ತೆಯಲ್ಲಿ ರೆಸಿಡೆನ್ಸಿ ರಸ್ತೆಯಿಂದ ಸಂಯುಕ್ತ ಕರ್ನಾಟಕ ಕಛೇರಿ ಗೇಟ್ ವರೆವಿಗೆ ರಸ್ತೆಯ ಪಶ್ಚಿಮದ ಕಡೆಗೆ ಮತ್ತು ಮನೆ ನಂ. 7 ರಿಂದ ಹೇಯ್ಸ್ ರಸ್ತೆಯವರೆಗೆ ಉತ್ತರದ ಕಡೆಗೆ ಪ್ಯಾರಲಲ್ ಪಾರ್ಕಿಂಗ್‌ಗೆ ಅವಕಾಶ ಕಲ್ಪಿಸಿದೆ.

ಸಿ.ಡಿ. ಡಿಸೋಜ ರಸ್ತೆಯಲ್ಲಿ ರೆಸಿಡೆನ್ಸಿ ರಸ್ತೆಯಿಂದ ಸಂಯುಕ್ತ ಕರ್ನಾಟಕ ಕಛೇರಿ ಗೇಟ್ ವರೆವಿಗೆ ರಸ್ತೆಯ ಪೂರ್ವದ ಕಡೆಗೆ ಮತ್ತು ಮನೆ ನಂ. 7 ರಿಂದ ಹೇಯ್ಸ್ ರಸ್ತೆಯವರೆಗೆ ದಕ್ಷಿಣದ ಕಡೆಗೆ ವಾಹನ ನಿಲುಗಡೆಯನ್ನು ನಿಷೇಧಿಸಿದೆ.

**ಶಾಂತಿ ಅಡ್ಡ ರಸ್ತೆ :** ಶಾಂತಿನಗರ ಅಡ್ಡ ರಸ್ತೆಯಲ್ಲಿ ಪೂರ್ವದ ಕಡೆಗೆ ವಾಹನ ನಿಲುಗಡೆಯನ್ನು ನಿಷೇಧಿಸಿದೆ. ಪಶ್ಚಿಮದ ಕಡೆಗೆ ಖಾಲಿ ಜಾಗ ಮತ್ತು ಒಂದೇ ಒಂದು ಮನೆ ಇದ್ದು, ಈ ಮನೆಯ ಗೇಟ್‌ನ ಎರಡೂ ಕಡೆಗೆ 10 ಅಡಿ ಹೊರತು ಪಡಿಸಿ ವಾಹನ ನಿಲುಗಡೆಗೆ ಅವಕಾಶ ಕಲ್ಪಿಸಿದೆ.

ಅಂತೆಯೇ ಕಲಂ 116 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 4 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಉಪಯೋಗಿಸಿಕೊಂಡು ಮೇಲ್ಕಂಡ ನಿರ್ಬಂಧನೆಯನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸೂಚನಾ ಫಲಕಗಳನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಸ್ಥಳೀಯ ಅಧಿಕಾರಿಗಳಿಗೆ ಆದೇಶಿಸಿರುತ್ತೇನೆ.

ಈ ಮೇಲ್ಕಂಡ ವ್ಯವಸ್ಥೆಯನ್ನು ದಿನಾಂಕ: 10.12.2005 ರಿಂದ ಜಾರಿಗೆ ಬರುವಂತೆ ಆದೇಶಿಸಿರುತ್ತೇನೆ.

ಈ ಆದೇಶವನ್ನು ನಾನು ಈ ದಿವಸ ಅಂದರೆ ದಿನಾಂಕ 22.11.2005 ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ನೀಡಿರುತ್ತೇನೆ.

**ಡಾ: ಅಜಯಕುಮಾರ ಸಿಂಹ**

ಪಿ.ಆರ್. 1920 ಪೊಲೀಸ್ ಕಮೀಷನರ್, ಬೆಂಗಳೂರು ನಗರ.

**ಪೊಲೀಸ್ ಕಮೀಷನರ್‌ರವರ ಕಛೇರಿ, ನಂ. 1, ಇನ್‌ಫೆಂಟ್ರಿ ರಸ್ತೆ, ಬೆಂಗಳೂರು ನಗರ.**

**ಸಂಖ್ಯೆ: 25-ಎ/ ಡಿಸಿಪಿ / ಸಂ.ಪೂ / 2005, ಬೆಂಗಳೂರು ನಗರ, ದಿನಾಂಕ: 23ನೇ ನವೆಂಬರ್ 2005.**

**ತಿದ್ದುಪಡಿ (ಅಧಿಸೂಚನೆ)**

ಬೆಂಗಳೂರು ನಗರದ ಹೃದಯ ಭಾಗದಲ್ಲಿನ ಪ್ರಮುಖ ರಸ್ತೆಗಳಾದ ರಾಷ್ಟ್ರೀಯ ವಿದ್ಯಾಲಯ ರಸ್ತೆ (ಆರ್.ವಿ. ರಸ್ತೆ), ಅವೆನ್ಯೂ ರಸ್ತೆ, ಸಂಪಿಗೆ ರಸ್ತೆ, ಲಾಲ್‌ಬಾಗ್ ರಸ್ತೆ, ನ್ಯೂ ಮಿಷಿನ್ ರಸ್ತೆ, ಬಿ.ವಿ.ಕೆ. ಅಯ್ಯಂಗಾರ್ ರಸ್ತೆ, ಆಸ್ಪತ್ರೆ ರಸ್ತೆ, ಗಾಂಧಿನಗರ ರಸ್ತೆಗಳು, ಕೆಂಪೇಗೌಡ 1, 2 ಮತ್ತು 3ನೇ ಅಡ್ಡ ರಸ್ತೆಗಳು, ಕನ್ನಿಂಗ್‌ಹ್ಯಾಂ ರಸ್ತೆ ಮತ್ತು ಮಿಲ್ಲರ್ ರಸ್ತೆಗಳು (ಒಟ್ಟು 13 ರಸ್ತೆಗಳು) ಪ್ರಾರಂಭದಲ್ಲಿ ನಿರ್ಮಾಣಗೊಂಡ ಸ್ಥಿತಿಯಲ್ಲಿಯೇ ಇದ್ದು ಇವುಗಳ ಅಗಲೀಕರಣದಲ್ಲಿ ಯಾವುದೇ ಬದಲಾವಣೆಯಾಗದೆ ಇರುತ್ತವೆ. ಇವುಗಳು ನಿರ್ಮಾಣಗೊಂಡ ಸಮಯದಲ್ಲಿದ್ದ ನಗರ ಸಂಚಾರವು ವರ್ಷದಿಂದ ವರ್ಷಕ್ಕೆ ದುಪ್ಪಟ್ಟುಗೊಂಡು ಪ್ರಸ್ತುತದ ಸಂಚಾರ ಸಾಂದ್ರತೆಯನ್ನು ತೆಗೆದುಕೊಳ್ಳಲು ಈ ರಸ್ತೆಗಳು ಸಮರ್ಥವಾಗಿರದೆ ಆಗಾಗ್ಗೆ ಸಂಚಾರದಲ್ಲಿ ಸ್ಥಗಿತಗೊಳ್ಳಲು ಮತ್ತು ಅಪಘಾತಗಳಿಗೂ ಕಾರಣವಾಗುತ್ತಿದೆ. ಈ ರಸ್ತೆಗಳ ಪೈಕಿ ಭಾಗಶಃ ರಸ್ತೆಗಳು ಏಕಮುಖ ಸಂಚಾರ ವ್ಯವಸ್ಥೆ ಹೊಂದಿದ್ದರೂ ಸಹ ರಸ್ತೆಗಳ ಒಂದು ಬದಿಯಲ್ಲಿ ವಾಹನಗಳ ನಿಲುಗಡೆ ಇರುವುದರಿಂದ ಸಂಚಾರ ಸ್ಥಗಿತಗೊಳ್ಳಲು ಮತ್ತು ಅಪಘಾತಗಳಿಗೆ ಮತ್ತೊಂದು ಪ್ರಮುಖ ಕಾರಣವಾಗಿರುತ್ತೆ. ಈ ರಸ್ತೆಗಳಲ್ಲಿನ ಸಂಚಾರ ಸ್ಥಗಿತ ಮತ್ತು ಅಸ್ಯವ್ಯಸ್ಥತೆಯನ್ನು ತಹಬಂದಿಗೆ ತರಲು ಕಷ್ಟಸಾಧ್ಯವಾಗಿರುತ್ತೆ. ಪ್ರಯುಕ್ತ ಈ ರಸ್ತೆಗಳಲ್ಲಿ ಹಾಲಿ ಇರುವ ನಿಲುಗಡೆ ವ್ಯವಸ್ಥೆಯನ್ನು ನಿರ್ಬಂಧಿಸಿ ಸಾರ್ವಜನಿಕರ ವಾಹನಗಳ ಮತ್ತು ಪಾದಚಾರಿಗಳ ಸುಗಮ ಸಂಚಾರಕ್ಕೆ ಅನುವು ಮಾಡಿಕೊಡುವುದು ಅವಶ್ಯಕವಾಗಿ ಕಂಡುಬಂದ ಪ್ರಯುಕ್ತ ಈ ರಸ್ತೆಗಳಲ್ಲಿ ರಸ್ತೆಯ ಎರಡೂ ಕಡೆ ವಾಹನಗಳ ನಿಲುಗಡೆಯನ್ನು ಸಂಪೂರ್ಣವಾಗಿ ನಿಷೇಧಿಸಿ ತಾ: 14.10.2005 ರಂದು ಸಂಖ್ಯೆ 25/ ಡಿಸಿಪಿ / ಸಂ.ಪೂ/ 2005 ರ ಅಧಿಸೂಚನೆ ಹೊರಡಿಸಲಾಗಿದ್ದ ಆದೇಶದಲ್ಲಿ ಸಂಪಿಗೆ ರಸ್ತೆ, ಗಾಂಧಿನಗರ 1ನೇ ಅಡ್ಡ ರಸ್ತೆ, ಗಾಂಧಿನಗರ 5ನೇ ಮುಖ್ಯ ರಸ್ತೆ ಮತ್ತು ಕನ್ನಿಂಗ್‌ಹ್ಯಾಂ ರಸ್ತೆಗಳನ್ನು ಹೊರತುಪಡಿಸಿ ತಿದ್ದುಪಡಿ ಮಾಡಬೇಕಾಗಿರುತ್ತದೆ.

ದಿನಾಂಕ: 14.10.2005 ರ ಅಧಿಸೂಚನೆಯ ಆದೇಶದಲ್ಲಿ ಮೇಲ್ಕಂಡ 13 ರಸ್ತೆಗಳಲ್ಲಿ ರಸ್ತೆಯ ಎರಡೂ ಕಡೆ ವಾಹನಗಳ ನಿಲುಗಡೆಯನ್ನು ನಿಷೇಧಿಸಿದ್ದು ಈ ರಸ್ತೆಗಳ ಪೈಕಿ 4 ರಸ್ತೆಗಳಾದ ಸಂಪಿಗೆ ರಸ್ತೆ, ಗಾಂಧಿನಗರ 1ನೇ ಅಡ್ಡ ರಸ್ತೆ, ಗಾಂಧಿನಗರ 5ನೇ ಮುಖ್ಯ ರಸ್ತೆ ಮತ್ತು ಕನ್ನಿಂಗ್‌ಹ್ಯಾಂ ರಸ್ತೆಗಳನ್ನು ಅಧಿಸೂಚನೆಯಿಂದ ತೆಗೆದುಹಾಕಲಾಗಿದೆ.

ಹಾಗೂ

ಸಂಪಿಗೆ ರಸ್ತೆ, ಗಾಂಧಿನಗರ 1ನೇ ಅಡ್ಡ ರಸ್ತೆ, ಗಾಂಧಿನಗರ 5ನೇ ಮುಖ್ಯ ರಸ್ತೆ ಮತ್ತು ಕನ್ನಿಂಗ್‌ಹ್ಯಾಂ ರಸ್ತೆಗಳ ಪ್ರದೇಶದ ಸಾರ್ವಜನಿಕರ / ನಗರ ವಾಸಿಗಳ / ಕಾರ್ಮಿಕರ ದೈನಂದಿನ ಅನುಕೂಲಕ್ಕೆ ತೊಂದರೆಯಾಗುತ್ತಿದ್ದು ಈ ರಸ್ತೆಗಳನ್ನು ಅಂದರೆ : -

(1) ಸಂಪಿಗೆ ರಸ್ತೆ - ಮಲ್ಲೇಶ್ವರಂ ವೃತ್ತದಿಂದ 18ನೇ ಕ್ರಾಸ್ ಜಂಕ್ಷನ್‌ವರೆಗೆ

(2) ಗಾಂಧಿನಗರ 1ನೇ ಅಡ್ಡ ರಸ್ತೆ - ಗಿರಿಯಾಸ್‌ನಿಂದ ತ್ರಿಭುವನ್ ಚಿತ್ರಮಂದಿರದವರೆಗೆ

(3) ಗಾಂಧಿನಗರ 5ನೇ ಮುಖ್ಯ ರಸ್ತೆ - ತ್ರಿಭುವನ್ ಚಿತ್ರಮಂದಿರದಿಂದ ಜನತಾ ಬಜಾರ್‌ವರೆಗೆ

(4) ಕನ್ನಿಂಗ್‌ಹ್ಯಾಂ ರಸ್ತೆ - ಬಾಳೆಕುಂದ್ರಿ ವೃತ್ತದಿಂದ ಚಂದ್ರಿಕಾ ಜಂಕ್ಷನ್‌ವರೆಗೆ

ಅಧಿಸೂಚನೆಯಿಂದ ಹೊರತುಪಡಿಸಬೇಕೆಂದು ಸಾರ್ವಜನಿಕರಿಂದ ಹೆಚ್ಚಿನ ಅಹವಾಲುಗಳು ಬಂದ ಮೇರೆಗೆ ಈ ರಸ್ತೆಗಳನ್ನು ಈ ಅಧಿಸೂಚನೆಯಿಂದ ಹೊರತುಪಡಿಸಿದೆ.

ಮೇಲ್ಕಂಡ ತಿದ್ದುಪಡಿಯನ್ನು ದಿನಾಂಕ: 27.11.2005 ರಿಂದ ಜಾರಿಗೆ ಬರುವಂತೆ ದಿನಾಂಕ: 14.10.2005ರ ಅಧಿಸೂಚನೆಯಿಂದ ಹೊರತುಪಡಿಸಿ ಆದೇಶ ಹೊರಡಿಸಲಾಗಿದೆ.-

**ಡಾ: ಅಜಯಕುಮಾರ ಸಿಂಹ**

ಪೊಲೀಸ್ ಕಮೀಷನರ್, ಬೆಂಗಳೂರು ನಗರ.

**ಅಧಿಸೂಚನೆ**

ಮೇಲ್ಕಂಡ ತಿದ್ದುಪಡಿ ಅಧಿಸೂಚನೆ ಸಂಖ್ಯೆ. 25-ಎ / ಡಿಸಿಪಿ / ಸಂ.ಪೂ / 2005 ತಾ: 23.11.2005ಕ್ಕೆ ಸಂಬಂಧಿಸಿದಂತೆ ಬೆಂಗಳೂರು ನಗರದ ಹೃದಯ ಭಾಗದಲ್ಲಿನ ಪ್ರಮುಖ ರಸ್ತೆಗಳಾದ ರಾಷ್ಟ್ರೀಯ ವಿದ್ಯಾಲಯ ರಸ್ತೆ (ಆರ್.ವಿ. ರಸ್ತೆ) ಅವೆನ್ಯೂ ರಸ್ತೆ, ಸಂಪಿಗೆ ರಸ್ತೆ, ಲಾಲ್‌ಬಾಗ್ ರಸ್ತೆ, ನ್ಯೂ ಮಿಷಿನ್ ರಸ್ತೆ, ಬಿ.ವಿ.ಕೆ. ಅಯ್ಯಂಗಾರ್ ರಸ್ತೆ, ಆಸ್ಪತ್ರೆ ರಸ್ತೆ, ಗಾಂಧಿನಗರ ರಸ್ತೆಗಳು, ಕೆಂಪೇಗೌಡ 1, 2 ಮತ್ತು 3ನೇ ಅಡ್ಡ ರಸ್ತೆಗಳು, ಕನ್ನಿಂಗ್‌ಹ್ಯಾಂ ರಸ್ತೆ ಮತ್ತು ಮಿಲ್ಲರ್ ರಸ್ತೆಗಳು ಪ್ರಾರಂಭದಲ್ಲಿ ನಿರ್ಮಾಣಗೊಂಡ ಸ್ಥಿತಿಯಲ್ಲಿಯೇ ಇದ್ದು ಇವುಗಳ ಅಗಲೀಕರಣದಲ್ಲಿ ಯಾವುದೇ ಬದಲಾವಣೆಯಾಗದೆ ಇರುತ್ತವೆ. ಇವುಗಳು ನಿರ್ಮಾಣಗೊಂಡ ಸಮಯದಲ್ಲಿದ್ದ ನಗರ ಸಂಚಾರವು ವರ್ಷದಿಂದ ವರ್ಷಕ್ಕೆ ದುಪ್ಪಟ್ಟುಗೊಂಡು ಪ್ರಸ್ತುತದ ಸಂಚಾರ ಸಾಂದ್ರತೆಯನ್ನು ತೆಗೆದುಕೊಳ್ಳಲು ಈ ರಸ್ತೆಗಳು ಸಮರ್ಥವಾಗಿರದೆ ಆಗಾಗ್ಗೆ ಸಂಚಾರದಲ್ಲಿ ಸ್ಥಗಿತಗೊಳ್ಳಲು ಮತ್ತು ಅಪಘಾತಗಳಿಗೂ ಕಾರಣವಾಗುತ್ತಿದೆ. ಈ ರಸ್ತೆಗಳ ಪೈಕಿ ಭಾಗಶಃ ರಸ್ತೆಗಳು ಏಕಮುಖ ಸಂಚಾರ ವ್ಯವಸ್ಥೆ ಹೊಂದಿದ್ದರೂ ಸಹ ರಸ್ತೆಗಳ ಒಂದು ಬದಿಯಲ್ಲಿ ವಾಹನಗಳ ನಿಲುಗಡೆ ಇರುವುದರಿಂದ ಸಂಚಾರ ಸ್ಥಗಿತಗೊಳ್ಳಲು ಮತ್ತು ಅಪಘಾತಗಳಿಗೆ ಮತ್ತೊಂದು ಪ್ರಮುಖ ಕಾರಣವಾಗಿರುತ್ತೆ. ಈ ರಸ್ತೆಗಳಲ್ಲಿನ ಸಂಚಾರ ಸ್ಥಗಿತ ಮತ್ತು ಅಸ್ಯವ್ಯಸ್ಥತೆಯನ್ನು ತಹಬಂದಿಗೆ ತರಲು ಕಷ್ಟಸಾಧ್ಯವಾಗಿರುತ್ತೆ. ಪ್ರಯುಕ್ತ ಈ ರಸ್ತೆಗಳಲ್ಲಿ ಹಾಲಿ ಇರುವ ನಿಲುಗಡೆ ವ್ಯವಸ್ಥೆಯನ್ನು ನಿರ್ಬಂಧಿಸಿ ಸಾರ್ವಜನಿಕರ ವಾಹನಗಳ ಮತ್ತು ಪಾದಚಾರಿಗಳ ಸುಗಮ ಸಂಚಾರಕ್ಕೆ ಅನುವು ಮಾಡಿಕೊಡುವುದು ಅವಶ್ಯಕವಾಗಿ ಕಂಡುಬಂದಿರುತ್ತದೆ. ಇದರ ಬಗ್ಗೆ ಸಾರ್ವಜನಿಕರಿಂದ ಅನೇಕ ಅಹವಾಲು ಬಂದಿವೆ ಮತ್ತು ಮಹಾನಗರ ಪಾಲಿಕೆ ಮತ್ತು ಇತರೆ ಸಂಸ್ಥೆಗಳಿಂದ ಕೆಲವು ಕಡೆ ವಾಹನ ನಿಲುಗಡೆಯನ್ನು ನಿರ್ಬಂಧಿಸಬೇಕೆಂದು ಸಲಹೆಗಳು ಸಹ ಸ್ವೀಕರಿಸಲಾಗಿದೆ.

ಜೆ.ಸಿ. ರಸ್ತೆ ಮತ್ತು ಕೆಂಪೇಗೌಡ ರಸ್ತೆಗಳಲ್ಲಿ ಸಾಕಷ್ಟು ವಾಹನ ನಿಲುಗಡೆಗಾಗಿ ಬಹುಮಹಡಿ ಕಟ್ಟಡಗಳನ್ನು ಮಹಾನಗರ ಪಾಲಿಕೆ ರವರು ನಿರ್ಮಾಣ ಮಾಡಿದ್ದು ಸಾರ್ವಜನಿಕರು ಅವುಗಳನ್ನು ಉಪಯೋಗಿಸಬಹುದಾಗಿದೆ.

ಆದ್ದರಿಂದ ಕಲಂ 115 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 3 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960 ರ ಪ್ರಕಾರ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಡಾ: ಅಜಯಕುಮಾರ ಸಿಂಹ, ಐ.ಪಿ.ಎಸ್. ಪೊಲೀಸ್ ಕಮೀಷನರ್, ಬೆಂಗಳೂರು ನಗರ ಆದ ನಾನು

ಈ ಕೆಳಕಂಡ ರಸ್ತೆಗಳಲ್ಲಿ ಅವುಗಳ ಮುಂದೆ ತೋರಿಸಿದ ಭಾಗದಲ್ಲಿ ವಾಹನಗಳ ಎರಡೂ ಕಡೆ ನಿಲುಗಡೆಯನ್ನು ಸಂಪೂರ್ಣವಾಗಿ ನಿಷೇಧಿಸಿ ಆದೇಶಿಸಿರುತ್ತೇನೆ.

**ಆದೇಶ**

| | | |
|---|---|---|
| 1 | **ರಾಷ್ಟ್ರೀಯ ವಿದ್ಯಾಲಯ ರಸ್ತೆ (ಆರ್.ವಿ. ರಸ್ತೆ)** | ಲಾಲ್‌ಬಾಗ್ ಪಶ್ಚಿಮ ದ್ವಾರದಿಂದ ಮಿನರ್ವ ವೃತ್ತದವರೆಗೆ |
| 2 | **ಅವೆನ್ಯೂ ರಸ್ತೆ** | ಸಿಟಿ ಮಾರ್ಕೆಟ್ ಚೌಕದಿಂದ ಆಸ್ಪತ್ರೆ ರಸ್ತೆ ಜಂಕ್ಷನ್‌ವರೆಗೆ |
| 3 | **ಸಂಪಿಗೆ ರಸ್ತೆ** | ಮಲ್ಲೇಶ್ವರಂ ವೃತ್ತದಿಂದ 18ನೇ ಕ್ರಾಸ್ ಜಂಕ್ಷನ್‌ವರೆಗೆ |
| 4 | **ಲಾಲ್‌ಬಾಗ್ ರಸ್ತೆ** | ಲಾಲ್‌ಬಾಗ್ ರಸ್ತೆ 4ನೇ ಕ್ರಾಸ್‌ನಿಂದ ಲಾಲ್‌ಬಾಗ್ ಮುಖ್ಯ ದ್ವಾರದವರೆಗೆ |
| 5 | **ನ್ಯೂ ಮಿಷಿನ್ ರಸ್ತೆ** | ಪೂರ್ಣಿಮ ಥಿಯೇಟರ್ ಜಂಕ್ಷನ್‌ನಿಂದ ಶಿವಾಜಿ ಜಂಕ್ಷನ್‌ವರೆಗೆ (ಕನ್ನಡ ಭವನ ವರೆಗೆ) |
| 6 | **ಬಿ.ವಿ.ಕೆ. ಅಯ್ಯಂಗಾರ್ ರಸ್ತೆ** | ಕೆಂಪೇಗೌಡ ಜಂಕ್ಷನ್‌ನಿಂದ ದೊಡ್ಡಪೇಟೆ ವೃತ್ತದವರೆಗೆ |
| 7 | **ಆಸ್ಪತ್ರೆ ರಸ್ತೆ** | ಬಳೇಪೇಟೆ ರಸ್ತೆ ಜಂಕ್ಷನ್‌ನಿಂದ ಅವೆನ್ಯೂ ರಸ್ತೆ ಜಂಕ್ಷನ್‌ವರೆಗೆ (ಅಭಿನಯ ಜಂಕ್ಷನ್ ಮುಖಾಂತರ) |
| 8 | **ಗಾಂಧಿನಗರ 1ನೇ ಮುಖ್ಯ ರಸ್ತೆ** | ಕನಕದಾಸ ವೃತ್ತದಿಂದ ಸಾಗರ್ ಜಂಕ್ಷನ್ ವರೆಗೆ |
| 9 | **ಗಾಂಧಿನಗರ 1ನೇ ಅಡ್ಡ ರಸ್ತೆ** | ಗಿರಿಯಾಸ್ ನಿಂದ ತ್ರಿಭುವನ್ ಚಿತ್ರಮಂದಿರದವರೆಗೆ |
| 10 | **ಗಾಂಧಿನಗರ 5ನೇ ಮುಖ್ಯ ರಸ್ತೆ** | ತ್ರಿಭುವನ್ ಚಿತ್ರಮಂದಿರದಿಂದ ಜನತಾ ಬಜಾರ್ ವರೆಗೆ |
| 11 | **ಕೆಂಪೇಗೌಡ ರಸ್ತೆಯ 1, 2, ಮತ್ತು 3ನೇ ಅಡ್ಡ ರಸ್ತೆಗಳು** | |
| 12 | **ಕನ್ನಿಂಗ್‌ಹ್ಯಾಂ ರಸ್ತೆ** | ಬಾಳೆಕುಂದ್ರಿ ವೃತ್ತದಿಂದ ಚಂದ್ರಿಕಾ ಜಂಕ್ಷನ್ ವರೆಗೆ |
| 13 | **ಮಿಲ್ಲರ್ ರಸ್ತೆ** | ಚಂದ್ರಿಕಾ ಜಂಕ್ಷನ್‌ನಿಂದ ಕಂಟೋನ್ಮೆಂಟ್ ರೈಲ್ವೆ ಕೆಳ ಸೇತುವೆ ವರೆಗೆ |

ಅಂತೆಯೇ ಕಲಂ 116 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 4 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಉಪಯೋಗಿಸಿಕೊಂಡು ಮೇಲ್ಕಂಡ ನಿರ್ಬಂಧನೆಯನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸೂಚನಾ ಫಲಕಗಳನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಸ್ಥಳೀಯ ಅಧಿಕಾರಿಗಳಿಗೆ ಆದೇಶಿಸಿರುತ್ತೇನೆ.

ಈ ಮೇಲ್ಕಂಡ ವ್ಯವಸ್ಥೆಯನ್ನು ದಿನಾಂಕ: 24.10.2005 ರಿಂದ ಒಂದು ತಿಂಗಳ ಕಾಲ ಪ್ರಾಯೋಗಿಕವಾಗಿ ಜಾರಿಗೆ ಬರುವಂತೆ ಆದೇಶಿಸಿರುತ್ತೇನೆ.

ಈ ಆದೇಶವನ್ನು ನಾನು ಈ ದಿನ ಅಂದರೆ ದಿನಾಂಕ: 14.10.2005 ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ನೀಡಿರುತ್ತೇನೆ.

**ಡಾ: ಅಜಯಕುಮಾರ ಸಿಂಹ**
ಪೊಲೀಸ್ ಕಮೀಷನರ್, ಬೆಂಗಳೂರು ನಗರ.

ಪಿ.ಆರ್. 1921

**ಪೊಲೀಸ್ ಕಮೀಷನರ್‌ರವರ ಕಛೇರಿ, ನಂ. 1, ಇನ್‌ಫೆಂಟ್ರಿ ರಸ್ತೆ, ಬೆಂಗಳೂರು ನಗರ.**

**ಸಂಖ್ಯೆ: 26 / ಡಿಸಿಪಿ / ಸಂ.ಪೂ / 2005, ಬೆಂಗಳೂರು ನಗರ, ದಿನಾಂಕ: 27ನೇ ಅಕ್ಟೋಬರ್, 2005.**

**ಅಧಿಸೂಚನೆ**

ಬೆಂಗಳೂರು ನಗರ ಜಯಮಹಲ್ ರಸ್ತೆ ಬಳಿ ಇರುವ ಕಂಟೋನ್ಮೆಂಟ್ ರೈಲ್ವೆ ಕೆಳ ಸೇತುವೆಯನ್ನು ವಿಸ್ತರಣೆ ಮಾಡುವ ಕಾಮಗಾರಿ ಕೆಲಸವನ್ನು ಬೆಂಗಳೂರು ಮಹಾನಗರ ಪಾಲಿಕೆ ಹಾಗೂ ರೈಲ್ವೆ ಇಲಾಖೆಯವರು ಕೈಗೊಂಡಿರುತ್ತಾರೆ. ಅಲ್ಲದೆ ಜಯಮಹಲ್ ರಸ್ತೆಯನ್ನು ಅಗಲೀಕರಣ ಹಾಗೂ ರಸ್ತೆಯನ್ನು ಅರ್ಧದಷ್ಟು ಕೆಳಕ್ಕೆ ಇಳಿಸುವ ಕಾಮಗಾರಿ ಕೆಲಸ ಪ್ರಗತಿಯಲ್ಲಿದ್ದು, ಜಯಮಹಲ್ ರಸ್ತೆಯಲ್ಲಿನ ಸಂಚಾರ ಸಾಂದ್ರತೆಯನ್ನು ತಗ್ಗಿಸಿ ಕಾಮಗಾರಿ ಕೆಲಸಕ್ಕೆ ಅನುಕೂಲ ಮಾಡಿಕೊಡುವುದು ಅನಿವಾರ್ಯವಾಗಿರುತ್ತದೆ. ಜಯಮಹಲ್ ರಸ್ತೆಯಲ್ಲಿನ ಸಂಚಾರ ಸಾಂದ್ರತೆಯನ್ನು ತಗ್ಗಿಸಲು ಹಾಗೂ ಸಾರ್ವಜನಿಕರ ಹಿತದೃಷ್ಟಿಯಿಂದ ಮತ್ತು ಸುಗಮ ಸಂಚಾರದ ಉದ್ದೇಶದಿಂದ ಜಯಮಹಲ್ ರಸ್ತೆ, ನಂದಿದುರ್ಗ ರಸ್ತೆ ಮತ್ತು ಮಿಲ್ಲರ್ ರಸ್ತೆಯ ಭಾಗಶಃ ರಸ್ತೆಯಲ್ಲಿ ಏಕಮುಖ ಸಂಚಾರ ವ್ಯವಸ್ಥೆಯನ್ನು ಜಾರಿಗೆ ತರುವುದು ಅವಶ್ಯಕವಾಗಿರುತ್ತೆ.

ಆದ್ದರಿಂದ ಕಲಂ 115 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 3 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960 ರ ಪ್ರಕಾರ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಡಾ: ಅಜಯಕುಮಾರ ಸಿಂಹ, ಐ.ಪಿ.ಎಸ್. ಪೊಲೀಸ್ ಕಮೀಷನರ್, ಬೆಂಗಳೂರು ನಗರ ಆದ ನಾನು ಈ ಕೆಳಕಂಡಂತೆ ಸಂಚಾರ ನಿರ್ಬಂಧನೆಗಳನ್ನು ಆದೇಶಿಸಿರುತ್ತೇನೆ.

1. **ಜಯಮಹಲ್ ರಸ್ತೆ :** ಜಯಮಹಲ್ ರಸ್ತೆಯಲ್ಲಿ ಕಂಟೋನ್ಮೆಂಟ್ ರೈಲ್ವೆ ಕೆಳ ಸೇತುವೆ ಬಳಿಯ ಜಯಮಹಲ್ ಸರ್ಕಲ್‌ನಿಂದ ಜಯಮಹಲ್ ರಸ್ತೆ - ಜೆ.ಸಿ. ನಗರ ಪೊಲೀಸ್ ಠಾಣೆ ಜಂಕ್ಷನ್‌ವರೆಗಿನ ದ್ವಿಮುಖ ಸಂಚಾರ ವ್ಯವಸ್ಥೆಯಲ್ಲಿ ಜಯಮಹಲ್ ಸರ್ಕಲ್‌ನಿಂದ ಜೆ.ಸಿ. ನಗರ ಪೊಲೀಸ್ ಠಾಣೆ ಜಂಕ್ಷನ್‌ವರೆಗೆ ದಕ್ಷಿಣದಿಂದ ಉತ್ತರಕ್ಕೆ ಸಾಗುವ ಸಂಚಾರವನ್ನು ಯಥಾಸ್ಥಿತಿಯಲ್ಲಿ ಉಳಿಸಿಕೊಂಡು ವಿರುದ್ಧ ದಿಕ್ಕಿನ ಸಂಚಾರವನ್ನು ಅಂದರೆ ಜೆ.ಸಿ. ನಗರ ಪೊಲೀಸ್ ಠಾಣೆ ಜಂಕ್ಷನ್‌ನಿಂದ ಜಯಮಹಲ್ ಸರ್ಕಲ್ ವರೆಗೆ ಉತ್ತರದಿಂದ ದಕ್ಷಿಣಕ್ಕೆ ಸಾಗುವ ಸಂಚಾರವನ್ನು ನಿಷೇಧಿಸಲಾಗಿದೆ.
2. **ನಂದಿದುರ್ಗ ರಸ್ತೆ :** ನಂದಿದುರ್ಗ ರಸ್ತೆಯಲ್ಲಿ ಜೆ.ಸಿ. ನಗರ ಪೊಲೀಸ್ ಠಾಣೆ ಜಂಕ್ಷನ್‌ನಿಂದ ನಂದಿದುರ್ಗ - ರಸ್ತೆ ಮಿಲ್ಲರ್ ರಸ್ತೆ ಜಂಕ್ಷನ್ ವರೆಗಿನ ದ್ವಿಮುಖ ಸಂಚಾರ ವ್ಯವಸ್ಥೆಯಲ್ಲಿ ಜೆ.ಸಿ. ನಗರ ಪೊಲೀಸ್ ಠಾಣೆ ಜಂಕ್ಷನ್‌ನಿಂದ ನಂದಿದುರ್ಗ ರಸ್ತೆ - ಮಿಲ್ಲರ್ ರಸ್ತೆ ಜಂಕ್ಷನ್‌ವರೆಗೆ ಉತ್ತರದಿಂದ ದಕ್ಷಿಣಕ್ಕೆ ಸಾಗುವ ಸಂಚಾರವನ್ನು ಯಥಾಸ್ಥಿತಿಯಲ್ಲಿ ಉಳಿಸಿಕೊಂಡು ವಿರುದ್ಧ ದಿಕ್ಕಿನ ಸಂಚಾರವನ್ನು ಅಂದರೆ ನಂದಿದುರ್ಗ ರಸ್ತೆ - ಮಿಲ್ಲರ್ ರಸ್ತೆ ಜಂಕ್ಷನ್‌ನಿಂದ ಜೆ.ಸಿ. ನಗರ ಪೊಲೀಸ್ ಠಾಣೆ ಜಂಕ್ಷನ್‌ವರೆಗೆ ದಕ್ಷಿಣದಿಂದ ಉತ್ತರಕ್ಕೆ ಸಾಗುವ ಸಂಚಾರವನ್ನು ನಿಷೇಧಿಸಲಾಗಿದೆ.
3. **ಮಿಲ್ಲರ್ ರಸ್ತೆ :** ಮಿಲ್ಲರ್ ರಸ್ತೆಯಲ್ಲಿ ನಂದಿದುರ್ಗ ರಸ್ತೆ - ಮಿಲ್ಲರ್ ರಸ್ತೆ ಜಂಕ್ಷನ್‌ನಿಂದ ಕಂಟೋನ್ಮೆಂಟ್ ರೈಲ್ವೆ ಕೆಳ ಸೇತುವೆ ಬಳಿಯ ಜಯಮಹಲ್ ಸರ್ಕಲ್‌ವರೆಗಿನ ದ್ವಿಮುಖ ಸಂಚಾರ ವ್ಯವಸ್ಥೆಯಲ್ಲಿ ನಂದಿದುರ್ಗ ರಸ್ತೆ - ಮಿಲ್ಲರ್ ರಸ್ತೆ ಜಂಕ್ಷನ್‌ನಿಂದ ಜಯಮಹಲ್ ಸರ್ಕಲ್‌ವರೆಗೆ ಪೂರ್ವದಿಂದ ಪಶ್ಚಿಮ ದಿಕ್ಕಿಗೆ ಸಾಗುವ ಸಂಚಾರವನ್ನು ಯಥಾಸ್ಥಿತಿಯಲ್ಲಿ ಉಳಿಸಿಕೊಂಡು ವಿರುದ್ಧ

ದಿಕ್ಕಿನ ಸಂಚಾರವನ್ನು ಅಂದರೆ ಜಯಮಹಲ್ ಸರ್ಕಲ್‌ನಿಂದ ನಂದಿದುರ್ಗ ರಸ್ತೆ - ಮಿಲ್ಲರ್ ರಸ್ತೆ ಜಂಕ್ಷನ್‌ವರೆಗೆ ಪಶ್ಚಿಮದಿಂದ ಪೂರ್ವಕ್ಕೆ ಸಾಗುವ ಸಂಚಾರವನ್ನು ನಿಷೇಧಿಸಲಾಗಿದೆ.

ಅಂತೆಯೇ ಕಲಂ 116 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 4 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಉಪಯೋಗಿಸಿಕೊಂಡು ಮೇಲ್ಕಂಡ ನಿರ್ಬಂಧನೆಯನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸೂಚನಾ ಫಲಕಗಳನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಸ್ಥಳೀಯ ಅಧಿಕಾರಿಗಳಿಗೆ ಆದೇಶಿಸಿರುತ್ತೇನೆ.

ಈ ಮೇಲ್ಕಂಡ ವ್ಯವಸ್ಥೆಯನ್ನು ದಿನಾಂಕ: 26.11.2005 ರಿಂದ ಎರಡು ತಿಂಗಳ ಕಾಲ ತಾತ್ಕಾಲಿಕವಾಗಿ ಜಾರಿಗೆ ಬರುವಂತೆ ಆದೇಶಿಸಿರುತ್ತೇನೆ.

ಈ ಆದೇಶವನ್ನು ನಾನು ಈ ದಿನ ಅಂದರೆ ದಿನಾಂಕ: 27.10.2005 ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ನೀಡಿರುತ್ತೇನೆ.

**ಡಾ: ಅಜಯಕುಮಾರ ಸಿಂಹ**

ಪಿ.ಆರ್. 1923 ಪೊಲೀಸ್ ಕಮೀಷನರ್, ಬೆಂಗಳೂರು ನಗರ.

**ಕಾರ್ಮಿಕ ಅಧಿಕಾರಿ ಹಾಗೂ ಪರಿಹಾರ ಆಯುಕ್ತರ ನ್ಯಾಯಾಲಯ, ಉಪವಿಭಾಗ-1, ಕಾರ್ಮಿಕ ಭವನ, ಐಟಿಐ ಕಾಂಪೌಂಡ್, ಬನ್ನೇರುಘಟ್ಟ ರಸ್ತೆ, ಡೈರಿ ಸರ್ಕಲ್, ಬೆಂಗಳೂರು-29**

**ಸಂಖ್ಯೆ: ಡಬ್ಲ್ಯೂಸಿಎ : ಎಫ್‌ಸಿ / ಸಿಆರ್ - 44 / 05, ಬೆಂಗಳೂರು, ದಿನಾಂಕ: 6ನೇ ಡಿಸೆಂಬರ್ 2005**

**ಅರ್ಜಿದಾರರು :** **ವಿರುದ್ಧ** **ಪ್ರತಿವಾದಿಗಳು :**

ಮೃತ ಕೆ. ದೇವರಾಜನ್, ಬಿನ್ ಕೆ. ಚೆಲ್ಲಪ್ಪನ್, ಹೆಚ್.ಎಲ್. ಲಕ್ಷ್ಮಣ್ ಬಿಲ್ಡಿಂಗ್, ಮನೆ ನಂ. 190, ರುಕ್ಮಿಣಿನಗರ, ನಾಗಸಂದ್ರ ಪೋಸ್ಟ್, ಬೆಂಗಳೂರು-74.

ಮೆ // ತ್ರಿವೇಣಿ ಇಂಜಿನಿಯರಿಂಗ್ & ಇಂಡಸ್ಟ್ರೀಸ್ ಲಿಮಿಟೆಡ್, ನಂ. 12-ಎ, ಪೀಣ್ಯ ಇಂಡಸ್ಟ್ರೀಯಲ್ ಏರಿಯಾ, ಪೀಣ್ಯ, ಬೆಂಗಳೂರು-58.

**ಪ್ರಕಟಣೆ**

ಈ ಮೇಲೆ ಕಾಣಿಸಿದ ಮೃತ ಕೆ. ದೇವರಾಜನ್, ಇವರು ಪ್ರತಿವಾದಿ ಸಂಸ್ಥೆಯಲ್ಲಿ ಕೆಲಸ ನಿರ್ವಹಿಸುವ ಸಲುವಾಗಿ ದಿನಾಂಕ 30.10.2005 ರಂದು ಅಪಘಾತ ಸಂಭವಿಸಿ ದಿನಾಂಕ 30.10.2005 ರಂದು ಮೃತಪಟ್ಟಿರುತ್ತಾರೆ.

ಪ್ರತಿವಾದಿಗಳು ಕಾಯ್ದೆಯನ್ವಯ ಪರಿಹಾರ ಹಣವನ್ನು ಈ ನ್ಯಾಯಾಲಯಕ್ಕೆ ಠೇವಣಿ ಮಾಡಿರುತ್ತಾರೆ. ಹಾಗೂ ಸದರಿ ಮೃತ ಕೆ. ದೇವರಾಜನ್, ರವರ ಅವಲಂಬಿತರಿಗೆ ಪರಿಹಾರದ ಹಣವನ್ನು ಕೊಡಿಸಲು ತಿಳಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಈ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ "ಅವಲಂಬಿತರು" ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 (ಮೂವತ್ತು) ದಿವಸಗಳೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೇಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

**ಮೊಹಮ್ಮದ್ ಯುಸುಫ್**

ಪಿ.ಆರ್. 1924 ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು ಹಾಗೂ ಕಾರ್ಮಿಕ ಅಧಿಕಾರಿ,

ಉಪ ವಿಭಾಗ-1, ಬೆಂಗಳೂರು-560002.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪವಿಭಾಗ-1, ಚಿಕ್ಕಮಗಳೂರು ಜಿಲ್ಲೆ.**

**ಸಂಖ್ಯೆ: ಕಾಪಕಾ : ಎಫ್ : 12 / 2003**

**ಅರ್ಜಿದಾರರು :** **ವಿರುದ್ಧ** **ಪ್ರತಿವಾದಿಗಳು :**

1) ಶ್ರೀಮತಿ ಮಂಜಮ್ಮ ಕೋಂ
ಲೇಟ್ ಹನುಮಂತಪ್ಪ ವಯಸ್ಸು
ಸುಮಾರು 30 ವರ್ಷಗಳು
ಕೂಲಿ, ಗಡಿಹಳ್ಳಿ ವಾಸಿ
ಅಜ್ಜಂಪುರ ಹೋಬಳಿ, ತರೀಕೆರೆ ತಾ:
ಚಿಕ್ಕಮಗಳೂರು ಜಿಲ್ಲೆ.

ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು
ಜಿಲ್ಲಾ ಪಂಚಾಯ್ತಿ, ಚಿಕ್ಕಮಗಳೂರು.

**ಪ್ರಕಟಣೆ**

ಹನುಮಂತಪ್ಪ ಎಂಬುವವರು ಪ್ರತಿವಾದಿಯಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ: 07.05.2003 ರಂದು ಅಪಘಾತ ಉಂಟಾಗಿ ಮೃತಪಟ್ಟಿರುವ ಬಗ್ಗೆ ಪರಿಹಾರ ಕೋರಿ ಮೇಲ್ಕಂಡ ಅರ್ಜಿದಾರರು ಅರ್ಜಿಯನ್ನು ಈ ನ್ಯಾಯಾಲಯದಲ್ಲಿ ಸಲ್ಲಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದು. ನಿಗಧಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೆ ಇದ್ದಲ್ಲಿ ಅರ್ಜಿದಾರರನ್ನು ಹೊರತುಪಡಿಸಿ ಮೃತನ ಅವಲಂಬಿತರು ಯಾರು ಇಲ್ಲ ಎಂದು ಪರಿಗಣಿಸಿ ಮೇಲ್ಕಂಡ ಅರ್ಜಿದಾರರ ಕ್ಲೇಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಕೈಗೊಳ್ಳಲಾಗುವುದು.

**ಆರ್.ಬಿ. ಬಾಗೇವಾಡಿ**

ಪಿ.ಆರ್. 1925 ಕಾರ್ಮಿಕ ಪರಿಹಾರ ಆಯುಕ್ತರು ಹಾಗೂ ಕಾರ್ಮಿಕ ಅಧಿಕಾರಿ,

ಉಪವಿಭಾಗ-1, ಚಿಕ್ಕಮಗಳೂರು.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಹಾವೇರಿ ಜಿಲ್ಲೆ, ಹಾವೇರಿ**

**ಪ್ರಕರಣ ಸಂಖ್ಯೆ: ಡಬ್ಲ್ಯೂ.ಸಿ.ಎ:ಎಫ್: 69/2005, ದಿನಾಂಕ: 30ನೇ ನವೆಂಬರ್ 2005**

**ಅರ್ಜಿದಾರರು :**
1) ಶ್ರೀಮತಿ ಲಕ್ಷ್ಮೀ ಕೋಂ ಕೃಷ್ಣಾ ಲಮಾಣಿ,
2) ಕು : ಗಂಗಾ ತಂದೆ ಕೃಷ್ಣಾ ಲಮಾಣಿ,
3) ಕು : ದರ್ಶನ್ ತಂದೆ ಕೃಷ್ಣಾ ಲಮಾಣಿ,
4) ಶ್ರೀಮತಿ ಸಕ್ರೆವ್ವ ಕೋಂ ದೇವಪ್ಪ ಲಮಾಣಿ,
ಎಲ್ಲರೂ ವಾಸ ಸಾ: ಯತ್ತಿನಹಳ್ಳಿ ತಾಂಡಾ
ತಾ: ಶಿಗ್ಗಾಂವಿ, ಜಿ: ಹಾವೇರಿ.

**ವಿರುದ್ಧ**

**ಪ್ರತಿವಾದಿಗಳು :**
1) ಶ್ರೀ ಎಚ್.ಜಿ. ಕೆಂಚರೆಡ್ಡಿಯವರ,
ಸಾ: ನಾಗನೂರ್,
ತಾ: ನವಲಗುಂದ, ಜಿ: ಗದಗ
2) ದಿ ಮ್ಯಾನೇಜರ್,
ನ್ಯಾಶನಲ್ ಇನ್ಸೂರೆನ್ಸ್ ಕಂ. ಲಿ.,
ಹುಬ್ಬಳ್ಳಿ.

**ಪ್ರಕಟಣೆ**

ಶ್ರೀ : ಶ್ರೀಮತಿ ಲಕ್ಷ್ಮೀ ಕೋಂ ಕೃಷ್ಣಾ ಲಮಾಣಿ, ಕು: ಗಂಗಾ ಹಾಗೂ ಕು: ದರ್ಶನ್ ತಂದೆ ಕೃಷ್ಣಾಲಮಾಣಿ, ಶ್ರೀಮತಿ ಸಕ್ರೆವ್ವ ಕೋಂ ದೇವಪ್ಪ ಲಮಾಣಿ ಇವರುಗಳಾದ ತಾವು ಮೃತ ಕೃಷ್ಣ ತಂದೆ ದೇವಲಪ್ಪ ಲಮಾಣಿ ಇವರ ಹೆಂಡತಿ, ಮಕ್ಕಳು ಮತ್ತು ತಾಯಿ ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಕೃಷ್ಣಾ ತಂದೆ ದೇವಲಪ್ಪಾ ಲಮಾಣಿ ಇವರು ಒಂದನೇ ಪ್ರತಿವಾದಿಗಳಾದ ಎಚ್.ಜಿ. ಕೆಂಚರೆಡ್ಡಿಯವರ ಇವರ ಲಾರಿಯಲ್ಲಿ 'ಕ್ಲೀನರ' ಆಗಿ ಕೆಲಸ ನಿರ್ವಹಿಸುತ್ತಿದ್ದಾಗ, ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲಿ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಹಾವೇರಿ ಜಿಲ್ಲಾ, ಹಾವೇರಿ.

ಪಿ.ಆರ್. 1926

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಹಾವೇರಿ ಜಿಲ್ಲೆ, ಹಾವೇರಿ**

**ಪ್ರಕರಣ ಸಂಖ್ಯೆ: ಡಬ್ಲ್ಯೂ.ಸಿ.ಎ:ಎಫ್: 114/2005, ದಿನಾಂಕ: 30ನೇ ನವೆಂಬರ್ 2005**

**ಅರ್ಜಿದಾರರು :**
1) ಶಿವಮೂರ್ತಯ್ಯ S/o.
ಗದಿಗೆಯ್ಯ ಕೊಪ್ಪದ
R/o.ಗೊಂಡಿಹಳ್ಳಿ
2) ಶ್ರೀಮತಿ ಸುಂದ್ರವ್ವ W/o.
ಶಿವಮೂರ್ತಯ್ಯ ಕೊಪ್ಪದ

**ವಿರುದ್ಧ**

**ಪ್ರತಿವಾದಿಗಳು :**
1) ಶ್ರೀ ಮಲ್ಲೇಶ @ ಮಲ್ಲೇಶಪ್ಪ ಬಿ. ಹಳ್ಳದ
Owner of T.T. Unit, ಗೊಂಡಿಹಳ್ಳಿ
2) New India Assurance Co. Ltd.,
ದಾವಣಗೆರೆ.

**ಪ್ರಕಟಣೆ**

ಶ್ರೀ ಶಿವಮೂರ್ತಯ್ಯ S/o. ಗದಿಗೆಯ್ಯ ಕೊಪ್ಪದ 2) ಶ್ರೀಮತಿ ಸುಂದ್ರವ್ವ W/o. ಶಿವಮೂರ್ತಯ್ಯ ಇವರುಗಳಾದ ತಾವು ಮೃತ ಪ್ರಭಯ್ಯ ಶಿವಮೂರ್ತಯ್ಯ ಕೊಪ್ಪದ ಇವರ ತಂದೆ ಮತ್ತು ತಾಯಿ ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಪ್ರಭಯ್ಯ ಇವರು ಒಂದನೇ ಪ್ರತಿವಾದಿಗಳಾದ ಶ್ರೀ ಮಲ್ಲೇಶಿ ಹಳ್ಳದ ಇವರ T.T. Unit ರಲ್ಲಿ ಹಮಾಲ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ, ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲಿ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಎಸ್. ವಿಜಯಕುಮಾರ**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಹಾವೇರಿ ಜಿಲ್ಲಾ, ಹಾವೇರಿ.

ಪಿ.ಆರ್. 1927

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಹಾವೇರಿ ಜಿಲ್ಲೆ, ಹಾವೇರಿ**

**ಪ್ರಕರಣ ಸಂಖ್ಯೆ: ಡಬ್ಲ್ಯೂ.ಸಿ.ಎ:ಎಫ್: 120/05, ದಿನಾಂಕ: 30ನೇ ನವೆಂಬರ್ 2005**

**ಅರ್ಜಿದಾರರು :**
1) ಶಿವಪ್ಪ ದುರಗಪ್ಪ ಹುಲ್ಲಿಣ್ಣ ನವರ
R/o. ಗುಡಗೂರ
2) ಶ್ರೀಮತಿ ಹುಲಗೆವ್ವ W/o.
ಶಿವಪ್ಪ ಹುಲ್ಲಿಣ್ಣನವರ

**ವಿರುದ್ಧ**

**ಪ್ರತಿವಾದಿಗಳು :**
1) ಶ್ರೀ ಖಂಡಪ್ಪ S/o. ಹನುಮಪ್ಪ ಮೈದೂರ
ಲಾರಿ ಮಾಲೀಕರು, R/o. ಗುಡಗೂರ
2) National Ins. Co. Ltd.,
ಹುಬ್ಬಳ್ಳಿ.

**ಪ್ರಕಟಣೆ**

ಶ್ರೀ : ಶ್ರೀಮತಿ ಶಿವಪ್ಪ ದುರಗಪ್ಪ ಹುಲ್ಲಿಣ್ಣನವರ ಮತ್ತು ಶ್ರೀಮತಿ ಹುಲಗೆವ್ವ @ ಗಂಗವ್ವ W/o. ಶಿವಪ್ಪ ಹುಲ್ಲಿಣ್ಣನವರ ಇವರುಗಳಾದ ತಾವು ಮೃತ ಜಗದೀಶ ಇವರ ತಂದೆ ಮತ್ತು ತಾಯಿ ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ

ಸಲ್ಲಿಸಿರುತ್ತಾರೆ. ಮೃತ ಜಗದೀಶ ಇವರು ಒಂದನೇ ಪ್ರತಿವಾದಿಗಳಾದ ಶ್ರೀ ಖಂಡಪ್ಪ ಹನುಮಪ್ಪ ಮೈದೂರ ಇವರ ಲಾರಿಯಲ್ಲಿ ಚಾಲಕ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ, ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲಿ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಎಸ್. ವಿಜಯಕುಮಾರ**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಹಾವೇರಿ ಜಿಲ್ಲಾ, ಹಾವೇರಿ.

ಪಿ.ಆರ್. 1928

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಉಪ-ವಿಭಾಗ-2, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಐ.ಟಿ.ಐ. ಆವರಣ, ಬೆಂಗಳೂರು-29**

**ಪ್ರಕರಣ ಸಂಖ್ಯೆ: ಡಬ್ಲ್ಯೂಸಿಎ:ಎಫ್‌ಸಿ 62/2005, ಬೆಂಗಳೂರು ದಿನಾಂಕ: 25ನೇ ನವೆಂಬರ್ 2005**

**ಅರ್ಜಿದಾರರು :**

1) ಶ್ರೀಮತಿ ಮುನಿಯಮ್ಮ
ಕೋಂ ಲೇಟ್ ರಂಗಸ್ವಾಮಿ,
2) B.R. ನವೀನ್ ಬಿನ್ ಲೇಟ್ ರಂಗಸ್ವಾಮಿ,
3) B.R. ದಿವ್ಯಾ D/o. ಲೇಟ್ ರಂಗಸ್ವಾಮಿ,
ಓಬಣ್ಣ ಬಿಲ್ಡಿಂಗ್, ಕೊತ್ತನೂರು,
ಉತ್ತರಹಳ್ಳಿ, ಬೆಂಗಳೂರು.

**ವಿರುದ್ಧ**

**ಪ್ರತಿವಾದಿಗಳು :**

1) ಬೀರಪ್ಪ ಬಿನ್ ಪುಂಡಲೀಕ
ನಂ: 288, 20ನೇ ಮೇನ್,
ನಂದಿನಿ ಲೇಔಟ್, ಬೆಂಗಳೂರು.
2) B.R. ರಾಜು ಬಿನ್ ರಾಮಣ್ಣ
ದೇವರಚಿಕ್ಕನಹಳ್ಳಿ, ಬನ್ನೇರುಘಟ್ಟ ರಸ್ತೆ,
ಬೆಂಗಳೂರು.
3) ಮೋನಪ್ಪ ಬಿನ್ ದುರ್ಗದ್ಯ
ನಂ. 301, ಈಶ್ವರ ಲೇಔಟ್, ಬೆಂಗಳೂರು.

**ಪ್ರಕಟಣೆ**

ಅರ್ಜಿದಾರರಾದ ಶ್ರೀಮತಿ ಮುನಿಯಮ್ಮ ಮತ್ತು ಇತರರು ಇವರುಗಳು ಈ ನ್ಯಾಯಾಲಯಕ್ಕೆ ಅರ್ಜಿಯೊಂದನ್ನು ಸಲ್ಲಿಸಿ, ದಿವಂಗತ ರಂಗಸ್ವಾಮಿ ಇವರು ಪ್ರತಿವಾದಿ - ಇವರ ಬಳಿ ಕೆಲಸ ನಿರ್ವಹಿಸುತ್ತಿದ್ದಾಗ ಅಪಘಾತ ಹೊಂದಿ ಮೃತಪಟ್ಟರೆಂದು ತಿಳಿಸಿರುತ್ತಾರೆ. ಅಲ್ಲದೆ ತಾವು ಮೃತರ ಅವಲಂಬಿತರಾದ್ದರಿಂದ ತಮಗೆ ಕಾಯ್ದೆಯನ್ವಯ ಪರಿಹಾರದ ಹಣವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಕೋರಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನದೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೇಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ.

ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಬೆಂಗಳೂರು ಉಪ-ವಿಭಾಗ-2, ಬೆಂಗಳೂರು.

ಪಿ.ಆರ್. 1929

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಉಪ-ವಿಭಾಗ-2, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಐ.ಟಿ.ಐ. ಆವರಣ, ಬೆಂಗಳೂರು-29**

**ಪ್ರಕರಣ ಸಂಖ್ಯೆ: ಡಬ್ಲ್ಯೂಸಿಎ:ಎಫ್‌ಸಿ 63/2005, ಬೆಂಗಳೂರು ದಿನಾಂಕ: 25ನೇ ನವೆಂಬರ್ 2005**

**ಅರ್ಜಿದಾರರು :**

1) ಶ್ರೀ ನಾಗರಾಜು ಬಿನ್
ಮರಿಲಿಂಗೇಗೌಡ.
2) ಶ್ರೀಮತಿ ಜಯಮ್ಮ ಕೋಂ ನಾಗರಾಜು,
ನಂ: 24, 4ನೇ ಕ್ರಾಸ್, 3ನೇ ಮೇನ್,
ಬನಶಂಕರಿ, 3ನೇ ಹಂತ,
ಬೆಂಗಳೂರು.

**ವಿರುದ್ಧ**

**ಪ್ರತಿವಾದಿಗಳು :**

1) ಶ್ರೀಮತಿ ಮುಷರತ್
ಯಾಸ್ಮೀನ್ ಕೋಂ ಬಷೀರ್ ಅಹ್ಮದಖಾನ್
ನಂ. 502, 1ನೇ ಕ್ರಾಸ್, 8ನೇ ಬ್ಲಾಕ್,
ಕೋರಮಂಗಲ, ಬೆಂಗಳೂರು.
2) ದಿ. ಓರಿಯಂಟಲ್ ಇನ್ಸೂರೆನ್ಸ್ ಕಂ. ಲಿ.,
ಕಬ್ಬನಪೇಟೆ ರಸ್ತೆ, ಬೆಂಗಳೂರು-2.

**ಪ್ರಕಟಣೆ**

ಅರ್ಜಿದಾರರಾದ 1. ನಾಗರಾಜು 2. ಶ್ರೀಮತಿ ಜಯಮ್ಮ ಇವರುಗಳು ಈ ನ್ಯಾಯಾಲಯಕ್ಕೆ ಅರ್ಜಿಯೊಂದನ್ನು ಸಲ್ಲಿಸಿ, ದಿವಂಗತ ಮುನಿರಾಜು ಅ: ಆದಿತ್ಯ ಇವರು ಪ್ರತಿವಾದಿ - ಇವರ ಬಳಿ ಕೆಲಸ ನಿರ್ವಹಿಸುತ್ತಿದ್ದಾಗ ಅಪಘಾತ ಹೊಂದಿ ಮೃತಪಟ್ಟರೆಂದು ತಿಳಿಸಿರುತ್ತಾರೆ. ಅಲ್ಲದೆ ತಾವು ಮೃತರ ಅವಲಂಬಿತರಾದ್ದರಿಂದ ತಮಗೆ ಕಾಯ್ದೆಯನ್ವಯ ಪರಿಹಾರದ ಹಣವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಕೋರಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ

ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನದೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೇಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ.

ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಪಿ.ಆರ್. 1930 ಬೆಂಗಳೂರು ಉಪ-ವಿಭಾಗ-2, ಬೆಂಗಳೂರು.

## ಆಯ್ಕೆ ಪ್ರಾಧಿಕಾರಿ ಹಾಗೂ ಉಪ ನಿರ್ದೇಶಕರು (ಆಡಳಿತ) ಸಾರ್ವಜನಿಕ ಶಿಕ್ಷಣ ಇಲಾಖೆ, ಬಳ್ಳಾರಿ ಜಿಲ್ಲೆ.

**ಪ್ರಕಟಣೆ**

2005-06 ನೇ ಸಾಲಿನ ಸರ್ಕಾರಿ ಶಾಲಾ ಶಿಕ್ಷಕರ ನೇಮಕಾತಿ ಅಧಿಸೂಚನೆ ಮತ್ತು ಅರ್ಜಿಸಹಿತ ಮಾಹಿತಿ ಪುಸ್ತಕ ಅಧ್ಯಾಯ-2 ರ ಪುಟ ಸಂಖ್ಯೆ 14 ರ 6(1) (ಎ) (3) ರ ಮೀಸಲಾತಿಯನ್ನು ಶಿಕ್ಷಕರ ನೇಮಕಾತಿಗೆ ಅವಕಾಶವಿಲ್ಲವೆಂದು "ಹಿಂತೆಗೆದುಕೊಳ್ಳಲಾಗಿದೆ".

6). ಪ್ರತಿ ಪ್ರವರ್ಗದಲ್ಲಿ ವಿವಿಧ ಗುಂಪುಗಳಿಗೆ ಮೀಸಲಾತಿ ಪ್ರಮಾಣ

1. ಅಂಗವಿಕಲ ಗುಂಪಿಗೆ ಕೆಳಗಿನವರು ಶಿಕ್ಷಕರ ನೇಮಕಾತಿಗೆ ಅರ್ಹರಾಗುತ್ತಾರೆ.
   ವಿವರಣೆ : ಅಂಗವಿಕಲ ಅಭ್ಯರ್ಥಿ ಎಂದರೆ (ಎ) 1 ಕಣ್ಣಿನ ದೃಷ್ಟಿಯನ್ನು ಸರಿಪಡಿಸುವ ಕನ್ನಡಕವನ್ನು ಹಾಕಿದಾಗ ಎರಡೂ ಕಣ್ಣಿನ ಪೈಕಿ ಉತ್ತಮವಾದ ಕಣ್ಣಿನಲ್ಲಿ 6:60 ಅಥವಾ 20:2000 (ಸ್ನಲನ್) ಅನ್ನು ಮೀರದಿರುವ ದೃಷ್ಟಿ ಸಾಮರ್ಥ್ಯ ಇರುವ ವ್ಯಕ್ತಿ.

**ಅಥವಾ**

2. 20 ಡಿಗ್ರಿಗಳು ಅಥವಾ ಅದಕ್ಕೂ ಕಡಿಮೆಯ ಕೋನದವರಗೆ ವಿಸ್ತರಿಸುವ ದೃಷ್ಟಿ ಕ್ಷೇತ್ರದ ಪರಿಮಿತಿಯನ್ನು ಹೊಂದಿರುವ ವ್ಯಕ್ತಿ.
3. ಸಂಪೂರ್ಣವಾಗಿ ದೃಷ್ಟಿ ಸಾಮರ್ಥ್ಯವನ್ನು ಕಳೆದು ಕೊಂಡಿರುವ ವ್ಯಕ್ತಿಯು ಶಿಕ್ಷಕರ ನೇಮಕಾತಿಗೆ ಪರಿಗಣಿಸಲಾಗುವುದಿಲ್ಲ.

ಆಯ್ಕೆ ಪ್ರಾಧಿಕಾರಿ ಹಾಗೂ ಉಪ ನಿರ್ದೇಶಕರು (ಆಡಳಿತ)
ಪಿ.ಆರ್. 1931 ಸಾರ್ವಜನಿಕ ಶಿಕ್ಷಣ ಇಲಾಖೆ, ಬಳ್ಳಾರಿ ಜಿಲ್ಲೆ.

## ಸಹಕಾರ ಇಲಾಖೆ

**ವಿಷಯ:** ಕಾರ್ಯದರ್ಶಿ, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ ಶ್ರೀರಂಗಪಟ್ಟಣ ಇವರಿಗೆ ಉಪ ಖಜಾನೆಯಿಂದ ವೇತನ ಭತ್ಯೆ ವಗೈರೆ ಪಡೆಯಲು ಮತ್ತು ಬಟವಾಡೆ ಮಾಡುವ ಅಧಿಕಾರಿ ಎಂದು ಘೋಷಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಅಧಿಸೂಚನೆ ಸಂಖ್ಯೆ: ಸಇ 56 ಎಂಆರ್ಇ 2001 ದಿನಾಂಕ: 29.10.2003.

2) ನಿರ್ದೇಶಕರು, ಕೃಷಿ ಮಾರಾಟ ಇಲಾಖೆ ರವರ ಪತ್ರ ಸಂಖ್ಯೆ: ಕೃಮಾಇ/296/ಸಿಬ್ಬಂದಿ-1(ಸಿ)/02, ದಿನಾಂಕ: 04.09.2004

**ಪ್ರಸ್ತಾವನೆ :**

ಮೇಲೆ ಕ್ರಮಾಂಕ (1) ರಲ್ಲಿ ಓದಲಾದ ದಿನಾಂಕ: 29.10.2003 ರ ಆದೇಶಾನುಸಾರ ಮಂಡ್ಯ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯನ್ನು ವಿಭಜಿಸಿ, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಮಂಡ್ಯ ಮತ್ತು ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಶ್ರೀರಂಗಪಟ್ಟಣ ಎಂದು ಎರಡು ಪ್ರತ್ಯೇಕವಾದ ಸಮಿತಿಗಳನ್ನು ರಚಿಸಿ, ಆದೇಶಿಸಲಾಗಿದೆ.

ಮೇಲೆ ಕ್ರಮಾಂಕ (2) ರಲ್ಲಿ ಓದಲಾದ ದಿನಾಂಕ: 04.09.2004 ರ ಪತ್ರದಲ್ಲಿ ನಿರ್ದೇಶಕರು, ಕೃಷಿ ಮಾರಾಟ ಇಲಾಖೆ, ಬೆಂಗಳೂರು ಇವರು ಶ್ರೀರಂಗಪಟ್ಟಣ ಮಾರುಕಟ್ಟೆ ಸಮಿತಿಯ ಕಾರ್ಯದರ್ಶಿಯ ಹುದ್ದೆಯನ್ನು ಸದರಿ ಸಮಿತಿಯ ಕಾರ್ಯದರ್ಶಿ / ಸಿಬ್ಬಂದಿಗಳಿಗೆ ವೇತನ ಭತ್ಯೆ ವಗೈರೆಗಳನ್ನು ಬಟವಾಡೆ ಮಾಡುವ ಕುರಿತು ಅಧಿಕಾರ ನೀಡುವ ಸಲುವಾಗಿ ಶ್ರೀರಂಗಪಟ್ಟಣ ಸಮಿತಿಯ ಕಾರ್ಯದರ್ಶಿಯವರನ್ನು ಬಟವಾಡೆ ಅಧಿಕಾರಿ ಎಂದು ಘೋಷಿಸಿ, ಸರ್ಕಾರದ ಆದೇಶ ನೀಡಲು ಕೋರಿರುತ್ತಾರೆ.

ನಿರ್ದೇಶಕರು, ಕೃಷಿ ಮಾರಾಟ ಇಲಾಖೆ, ಬೆಂಗಳೂರು ಇವರ ಪ್ರಸ್ತಾವನೆಯನ್ನು ಸಮಗ್ರವಾಗಿ ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಇ 267 ಮಾಇಸೇ 2004, ಬೆಂಗಳೂರು, ದಿನಾಂಕ: 01ನೇ ಡಿಸೆಂಬರ್ 2005.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಶ್ರೀರಂಗಪಟ್ಟಣ ಇದರ ಕಾರ್ಯದರ್ಶಿ / ಸಿಬ್ಬಂದಿಗಳಿಗೆ ವೇತನ ಭತ್ಯೆ ವಗೈರೆಗಳನ್ನು ಹೊರತೆಗೆಯುವ ಮತ್ತು ಬಟವಾಡೆ ಮಾಡುವುದಕ್ಕೆ ಸಂಬಂಧಿಸಿದಂತೆ, ಕಾರ್ಯದರ್ಶಿ, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಶ್ರೀರಂಗಪಟ್ಟಣ ಇವರನ್ನು "ಬಟವಾಡೆ ಅಧಿಕಾರಿ" ಎಂದು ಈ ಮೂಲಕ ಘೋಷಿಸಲಾಗಿದೆ.

ಈ ಬಗ್ಗೆ ಸಿಬ್ಬಂದಿ ವೆಚ್ಚವನ್ನು ಲೆಕ್ಕ ಶೀರ್ಷಿಕೆ ಸಂಖ್ಯೆ: 3475-ಇತರೆ ಆರ್ಥಿಕ ಸೇವೆಗಳು, 107-ಮಾರುಕಟ್ಟೆಗಳ ವಿನಿಮಯ, 02-ಮಾರುಕಟ್ಟೆ ಸಮಿತಿಗಳು (ಯೋಜನೇತರ) (3475-00-107-0-02)ರ ಅಡಿಯಲ್ಲಿ ಭರಿಸಲಾಗುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 849 ವೆಚ್ಚ-2/04, ದಿನಾಂಕ: 21.07.2005 ಮತ್ತು ಸಂಖ್ಯೆ: ಆಇ/ 520/ವೆಚ್ಚ-2/05 ದಿನಾಂಕ: 09.08.2005 ರಲ್ಲಿನ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
ಪಿ.ಆರ್. 1932 **ಜಾಯ್ಸ್ ಸುರೇಂದ್ರ**
ಸರ್ಕಾರದ ಜಂಟಿ ಕಾರ್ಯದರ್ಶಿ, ಸಹಕಾರ ಇಲಾಖೆ.

## ಸಹಕಾರ ಇಲಾಖೆ

**ವಿಷಯ:** ಕಾರ್ಯದರ್ಶಿ, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ ಶೃಂಗೇರಿ ಇವರನ್ನು ಉಪ ಖಜಾನೆಯಿಂದ ವೇತನ ಭತ್ಯೆ ವಗೈರೆ ಪಡೆಯಲು ಮತ್ತು ಬಟವಾಡೆ ಮಾಡುವ ಅಧಿಕಾರಿ ಎಂದು ಘೋಷಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಸಿಎಂಡಬ್ಲ್ಯೂ 363 ಎಂಆರ್ಇ 2000(1) ದಿನಾಂಕ: 01.06.2001.

2) ಸರ್ಕಾರದ ಆದೇಶ ಸಂಖ್ಯೆ: ಸಮಾತೂ 24 ಎಂಡಿಎಸ್ 91 ದಿನಾಂಕ: 28.06.2001.

3) ಸರ್ಕಾರದ ಆದೇಶ ಸಂಖ್ಯೆ: ಸಮಾತೂ 363 ಎಂಆರ್ಇ 2000 ದಿನಾಂಕ: 31.10.2001.

4) ಆಯುಕ್ತರು, ಕೃಷಿ ಮಾರಾಟ ಇಲಾಖೆ ರವರ ಪತ್ರ ಸಂಖ್ಯೆ: ಕೃಮಾಇ/158/ಸಿಬ್ಬಂದಿ-1(ಸಿ) / 05 ದಿನಾಂಕ: 16.05.2005.

**ಪ್ರಸ್ತಾವನೆ :**

ಮೇಲೆ ಕ್ರಮಾಂಕ (1) ಮತ್ತು (2) ರಲ್ಲಿ ಓದಲಾದ ಆದೇಶಾನುಸಾರ ಕೊಪ್ಪ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯನ್ನು ವಿಭಜಿಸಿ, ಕೊಪ್ಪ ಮತ್ತು ಶೃಂಗೇರಿ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗಳು ಎಂದು ಎರಡು ಪ್ರತ್ಯೇಕವಾದ ಸಮಿತಿಗಳನ್ನು ರಚಿಸಿ, ಆದೇಶಿಸಲಾಗಿದೆ. ಕ್ರಮಾಂಕ (3) ರಲ್ಲಿನ ಆದೇಶಾನುಸಾರ ಚಿಕ್ಕನಾಯಕನಹಳ್ಳಿ, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯಿಂದ ಮಂಜೂರಾದ ಹುದ್ದೆಗಳನ್ನು ಶೃಂಗೇರಿ, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಸ್ಥಳಾಂತರಿಸಿ ಆದೇಶಿಸಲಾಗಿದೆ.

ಮೇಲೆ ಕ್ರಮಾಂಕ (4) ರಲ್ಲಿ ಓದಲಾದ ದಿನಾಂಕ: 16.05.2005 ರ ಪತ್ರದಲ್ಲಿ ಆಯುಕ್ತರು, ಕೃಷಿ ಮಾರಾಟ ಇಲಾಖೆ, ಬೆಂಗಳೂರು ಇವರು ಶೃಂಗೇರಿ ಮಾರುಕಟ್ಟೆ ಸಮಿತಿಯ ಕಾರ್ಯದರ್ಶಿಯ ಹುದ್ದೆಯನ್ನು ಸದರಿ ಸಮಿತಿಯ ಕಾರ್ಯದರ್ಶಿ / ಸಿಬ್ಬಂದಿಗಳಿಗೆ ವೇತನ ಭತ್ಯೆ ವಗೈರೆಗಳನ್ನು ಬಟವಾಡೆ ಮಾಡುವ ಕುರಿತು ಅಧಿಕಾರ ನೀಡುವ ಸಲುವಾಗಿ ಶೃಂಗೇರಿ ಸಮಿತಿಯ ಕಾರ್ಯದರ್ಶಿಯವರನ್ನು "ಬಟವಾಡೆ ಅಧಿಕಾರಿ" ಎಂದು ಘೋಷಿಸಿ, ಸರ್ಕಾರದ ಆದೇಶ ನೀಡಲು ಕೋರಿರುತ್ತಾರೆ.

ಆಯುಕ್ತರು, ಕೃಷಿ ಮಾರಾಟ ಇಲಾಖೆ, ಬೆಂಗಳೂರು ಇವರ ಪ್ರಸ್ತಾವನೆಯನ್ನು ಸಮಗ್ರವಾಗಿ ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಇ 150 ಮಾಇಸೇ 2004, ಬೆಂಗಳೂರು, ದಿನಾಂಕ: 01ನೇ ಡಿಸೆಂಬರ್ 2005.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಶೃಂಗೇರಿ ಇದರ ಕಾರ್ಯದರ್ಶಿ / ಸಿಬ್ಬಂದಿಗಳಿಗೆ ವೇತನ ಭತ್ಯೆ ವಗೈರೆಗಳನ್ನು ಉಪ ಖಜಾನೆ ಶೃಂಗೇರಿ ಮೂಲಕ, ಹೊರತೆಗೆಯುವ ಮತ್ತು ಬಟವಾಡೆ ಮಾಡುವುದಕ್ಕೆ ಸಂಬಂಧಿಸಿದಂತೆ, ಕಾರ್ಯದರ್ಶಿ, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಶೃಂಗೇರಿ ಇವರನ್ನು "ಬಟವಾಡೆ ಅಧಿಕಾರಿ" ಎಂದು ಈ ಮೂಲಕ ಘೋಷಿಸಲಾಗಿದೆ.

ಈ ಬಗ್ಗೆ ಸಿಬ್ಬಂದಿ ವೆಚ್ಚವನ್ನು ಲೆಕ್ಕ ಶೀರ್ಷಿಕೆ ಸಂಖ್ಯೆ: 3475-ಇತರೆ ಆರ್ಥಿಕ ಸೇವೆಗಳು, 107-ಮಾರುಕಟ್ಟೆಗಳ ವಿನಿಮಯ, 02-ಮಾರುಕಟ್ಟೆ ಸಮಿತಿಗಳು (ಯೋಜನೇತರ) (3475-00-107-0-02)ರ ಅಡಿಯಲ್ಲಿ ಭರಿಸಲಾಗುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 593 ವೆಚ್ಚ-2/05, ದಿನಾಂಕ: 22.10.2005 ರಲ್ಲಿನ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1933

**ಜಾಯ್ಸ್ ಸುರೇಂದ್ರ**

ಸರ್ಕಾರದ ಜಂಟಿ ಕಾರ್ಯದರ್ಶಿ, ಸಹಕಾರ ಇಲಾಖೆ.

**ಕಂದಾಯ ಇಲಾಖೆ**

**ಸಂಖ್ಯೆ: ಕಂಇ 77 ಎಲ್ಆರ್ಎಂ 2004, ಬೆಂಗಳೂರು, ದಿನಾಂಕ 02ನೇ ಡಿಸೆಂಬರ್ 2005.**

**ಅಧಿಸೂಚನೆ**

ಶ್ರೀ ಹೇಮರಡ್ಡಿ ಮಲ್ಲಮ್ಮ ವಿದ್ಯಾ ಸಂಸ್ಥೆ (ರಿ), ಕುಣಕೇರಿ ಇವರು ಕೊಪ್ಪಳ ಜಿಲ್ಲೆ, ಕೊಪ್ಪಳ ತಾಲ್ಲೂಕು, ಕುಣಕೇರಿ ಗ್ರಾಮದ ಜಮೀನುಗಳನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ದಾನವಾಗಿ ಪಡೆಯಲು ಬೇಡಿಕೆಯನ್ನು ಸಲ್ಲಿಸಿದ್ದಾರೆ. ಜಿಲ್ಲಾಧಿಕಾರಿಗಳು, ಕೊಪ್ಪಳ ಜಿಲ್ಲೆ ಇವರು ತಮ್ಮ ಪತ್ರ ಸಂಖ್ಯೆ: ಕಂದಾಯ/ಭೂಸು/62/2002–03 ದಿನಾಂಕ 20.10.2005 ರಲ್ಲಿ ಪ್ರಸ್ತಾಪಿತ ಗ್ರಾಮದ ಸರ್ವೆ ನಂಬರುಗಳಲ್ಲಿ ಒಟ್ಟು 89 ಎಕರೆ 16 ಗುಂಟೆ ಜಮೀನನ್ನು ದಾನವಾಗಿ ಪಡೆಯಲು ಸದರಿ ಸಂಸ್ಥೆಗೆ ಕರ್ನಾಟಕ ಭೂಸುಧಾರಣೆ ಅಧಿನಿಯಮ, 1961ರ ಕಲಂ 109(1) ರಡಿ ಸರ್ಕಾರದ ಅನುಮತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ. ಶ್ರೀ ಹೇಮರಡ್ಡಿ ಮಲ್ಲಮ್ಮ ವಿದ್ಯಾ ಸಂಸ್ಥೆ (ರಿ), ಕುಣಕೇರಿ ಗ್ರಾಮ, ಕೊಪ್ಪಳ ತಾಲೂಕು ಇವರು ದಿನಾಂಕ 15.7.2005 ರಂದು ಸಲ್ಲಿಸಿರುವ ಪರಿಷ್ಕೃತ ಮನವಿಯಲ್ಲಿ ಕೊಪ್ಪಳ ಜಿಲ್ಲೆ, ಕೊಪ್ಪಳ ತಾಲೂಕು, ಕುಣಕೇರಿ ಗ್ರಾಮದ ಸರ್ವೆ ನಂ.271/ಎ ರಲ್ಲಿ 8 ಎಕರೆ 10 ಗುಂಟೆ, 271/ಸಿ ರಲ್ಲಿ 4 ಎಕರೆ 05 ಗುಂಟೆ, 275/ಎ ರಲ್ಲಿ 2 ಎಕರೆ 25 ಗುಂಟೆ, 275/ಬಿ ರಲ್ಲಿ 2 ಎಕರೆ 25 ಗುಂಟೆ ಜಮೀನುಗಳನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಧಾನವಾಗಿ ಪಡೆಯಲು ಕರ್ನಾಟಕ ಭೂಸುಧಾರಣೆ ಕಾಯ್ದೆಯ ಕಲಂ 109(1) ರಡಿ ಅನುಮತಿ ನೀಡುವ ಬಗ್ಗೆ ಕೋರಿರುತ್ತಾರೆ.

ಪ್ರಸ್ತಾಪಿತ ಸಂಸ್ಥೆಯು ಇಂಡಿಯನ್ ಟ್ರಸ್ಟ್ ಆಕ್ಟ್, 1982ರ ಸೆಕ್ಷನ್ 2(15), 11–ಬಿ ಮತ್ತು 80–ಜಿ ರನ್ವಯ ದಿನಾಂಕ 16.12.1998 ರಂದು ನೋಂದಾಯಿಸಲ್ಪಟ್ಟಿದೆ. ಅರ್ಜಿದಾರರು ಪ್ರಾಜೆಕ್ಟ್ ವರದಿಯನ್ನು ಸಲ್ಲಿಸಿದ್ದು, ಅದು ಅರ್ಜಿದಾರರ ಉದ್ದೇಶಕ್ಕೆ ಪೂರಕವಾಗಿದೆ. ಪ್ರಸ್ತಾಪಿತ ಜಮೀನಿನ ಖಾತೆದಾರರಿಂದ ಜಮೀನನ್ನು ದಾನವಾಗಿ ಪಡೆಯಲು ಕರಾರು ಮಾಡಿಕೊಂಡಿರುತ್ತಾರೆ.

ಪ್ರಸ್ತಾಪಿತ ಜಮೀನು ಕರ್ನಾಟಕ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್) ಅಧಿನಿಯಮ 1978, ಕರ್ನಾಟಕ ಭೂ ಮಂಜೂರಾತಿ ನಿಯಮಾವಳಿಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಕರ್ನಾಟಕ ಭೂಸುಧಾರಣೆ ಅಧಿನಿಯಮ, 1961ರ ಕಲಂ 109(1)(ii) ರ ಪ್ರಕಾರ ಶೈಕ್ಷಣಿಕ ಉದ್ದೇಶಕ್ಕೆ 4 ಯೂನಿಟ್‌ವರೆಗೆ ಜಮೀನನ್ನು ಹೊಂದಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆ ಕರ್ನಾಟಕ ಭೂಸುಧಾರಣೆ (ತಿದ್ದುಪಡಿ) ಅಧಿನಿಯಮ, 1995ರ ಕಲಂ 109(1)(ii) ಮತ್ತು ಕರ್ನಾಟಕ ಭೂಸುಧಾರಣೆ (ತಿದ್ದುಪಡಿ) ನಿಯಮಗಳು, 1996ರ ನಿಯಮ 38ಬಿ(2)(ಎ) ಮತ್ತು (ಬಿ) ರಲ್ಲಿನ ಷರತ್ತುಗಳನ್ನು ಪೂರೈಸಿದ್ದು, ಕರ್ನಾಟಕ ಭೂಸುಧಾರಣೆ ಅಧಿನಿಯಮ, 1961ರ ಕಲಂ 63, 79ಎ, 79ಬಿ ಮತ್ತು 80 ಕ್ಕೆ ವಿನಾಯಿತಿನೀಡಿ ಶ್ರೀ ಹೇಮರಡ್ಡಿ ಮಲ್ಲಮ್ಮ ವಿದ್ಯಾ ಸಂಸ್ಥೆ (ರಿ), ಕುಣಕೇರಿ ಇವರು ಕೊಪ್ಪಳ ಜಿಲ್ಲೆ, ಕೊಪ್ಪಳ ತಾಲೂಕು, ಕುಣಕೇರಿ ಗ್ರಾಮದ ಸರ್ವೆ ನಂ.271/ಎ ರಲ್ಲಿ 8 ಎಕರೆ 10 ಗುಂಟೆ, 271/ಸಿ ರಲ್ಲಿ 4 ಎಕರೆ 05 ಗುಂಟೆ, 275/ಎ ರಲ್ಲಿ 2 ಎಕರೆ 25 ಗುಂಟೆ, 275/ಬಿ ರಲ್ಲಿ 2 ಎಕರೆ 25 ಗುಂಟೆ ಹೀಗೆ ಒಟ್ಟು 17 ಎಕರೆ 25 ಗುಂಟೆ ಜಮೀನುಗಳನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಧಾನವಾಗಿ ಪಡೆಯಲು ಕರ್ನಾಟಕ ಭೂಸುಧಾರಣೆ ಅಧಿನಿಯಮ, 1961ರ ಕಲಂ 109ರ ಅಡಿ ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟಂತೆ ಸರ್ಕಾರದ ಅನುಮತಿ ನೀಡಲಾಗಿದೆ :

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷಗಳೊಳಗಾಗಿ ಉಪಯೋಗಿಸತಕ್ಕದ್ದು ಮತ್ತು ಆ ಬಗ್ಗೆ ಜಿಲ್ಲಾಧಿಕಾರಿಗಳ ಮುಖಾಂತರ ಸರ್ಕಾರಕ್ಕೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ, ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ, 1956ರ ಕಲಂ 3 ರಲ್ಲಿ ಹೇಳಿರುವಂತೆ ಶೇಕಡ 55 ಪೇಯ್ಡ್ ಅಪ್ ಷೇರು ಬಂಡವಾಳ ಹೊಂದಿದ ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ನಿಯಂತ್ರಿತ ಅಥವಾ ಎರಡರ ಹಿಡಿತ ಹೊಂದಿರುವ ಸರ್ಕಾರದ ಸಂಘ/ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
3. ಜಮೀನು ನಗರಾಭಿವೃದ್ಧಿ ಪ್ರಾಧಿಕಾರದ ಸಿ.ಡಿ.ಪಿ/ಒ.ಡಿ.ಪಿ. ವ್ಯಾಪ್ತಿಯೊಳಗೆ ಬಂದರೆ, ಅದರಂತೆ ಅನುಮತಿ ಪಡೆದು ಉಪಯೋಗಿಸತಕ್ಕದ್ದು.
4. ಈ ಅನುಮತಿಯು ಕರ್ನಾಟಕ ಭೂಸುಧಾರಣೆ ಅಧಿನಿಯಮ, 1961ರ ಕಲಂ 109(1) ರನ್ವಯ ವಿನಾಯಿತಿ ಮಾತ್ರವಾಗಿರುತ್ತದೆ. ಬೇರೆ ಕಾನೂನುಗಳ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.
5. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಕರ್ನಾಟಕ ಭೂ ಕಂದಾಯ ಅಧಿನಿಯಮ, 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯತಕ್ಕದ್ದು.
6. ಸಂಸ್ಥೆ ನಡೆಸುವ ಚಟುವಟಿಕೆಗಳು ಸ್ಥಳೀಯ ಕಾನೂನು, ಕರ್ನಾಟಕ ಮತ್ತು ಭಾರತದ ಕಾನೂನುಗಳನ್ನು ಪಾಲಿಸತಕ್ಕದ್ದು.
7. ಪ್ರಸ್ತಾಪಿತ ಜಮೀನುಗಳಲ್ಲಿ ಯಾವುದೇ ಅಭಿವೃದ್ಧಿ ಕಾರ್ಯ ಕೈಗೊಳ್ಳುವ ಮೊದಲು ಜಮೀನಿನ ವಿನ್ಯಾಸಕ್ಕೆ ನಗರ ಯೋಜನಾ ಇಲಾಖೆ/ಅಭಿವೃದ್ಧಿ ಪ್ರಾಧಿಕಾರ/ಸ್ಥಳೀಯ ಪ್ರಾಧಿಕಾರಗಳಿಂದ ಅನುಮೋದನೆ ಪಡೆಯತಕ್ಕದ್ದು.
8. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾಗಿರುವ ಅನುಮತಿಯನ್ನು ಕಾನೂನು ರೀತ್ಯ ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಿಕೊಳ್ಳಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1934

**ಬಿ. ಚಿಕ್ಕರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ
(ಭೂಸುಧಾರಣೆ)

**ಕಂದಾಯ ಇಲಾಖೆ**

**ಸಂಖ್ಯೆ: ಕಂಇ 103 ಎಲ್‌ಆರ್‌ಎಂ 2005, ಬೆಂಗಳೂರು, ದಿನಾಂಕ 03ನೇ ಡಿಸೆಂಬರ್ 2005.**

**ಅಧಿಸೂಚನೆ**

ಸೇಂಟ್ ಲಾರೆನ್ಸ್ ಎಜುಕೇಶನ್ ಸೊಸೈಟಿ, ಮುಂಬೈ ಇವರು ಬೆಂಗಳೂರು ಜಿಲ್ಲೆ, ಆನೇಕಲ್ ತಾಲೂಕು, ಜಿಗಣಿ ಹೋಬಳಿ, ಗೊಲ್ಲಹಳ್ಳಿ ಗ್ರಾಮದ ಸರ್ವೆ ನಂ. 13 ರಲ್ಲಿ 1 ಎಕರೆ 35 ಗುಂಟೆ, 14 ರಲ್ಲಿ 2 ಎಕರೆ 30 ಗುಂಟೆ ಮತ್ತು 15 ರಲ್ಲಿ 0–26 ಗುಂಟೆ ಹೀಗೆ ಒಟ್ಟು 5 ಎಕರೆ 14 ಗುಂಟೆ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಖರೀದಿಸಲು ಮಾಡಿದ ಬೇಡಿಕೆ ಹಾಗೂ ನಮೂನೆ 15ಎ ಮತ್ತು 15ಎಎ ಗಳಲ್ಲಿ ನೀಡಿದ ಮಾಹಿತಿ ಅನುಸರಿಸಿ ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ ಇವರು ತಮ್ಮ ಪತ್ರ ಸಂಖ್ಯೆ:ಎಲ್‌ಆರ್‌ಎಫ್/ಸಿಆರ್/11/2005–06 ದಿನಾಂಕ 11.08.2005 ರಲ್ಲಿ ಪ್ರಸ್ತಾಪಿತ ಗ್ರಾಮದ ಒಟ್ಟು 5–14 ಎಕರೆ ಜಮೀನನ್ನು ಖರೀದಿಸಲು ಸದರಿ ಸಂಸ್ಥೆಗೆ ಕರ್ನಾಟಕ ಭೂಸುಧಾರಣೆ ಅಧಿನಿಯಮ, 1961ರ ಕಲಂ 109 ರಡಿ ಸರ್ಕಾದ ಅನುಮತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾಪಿತ ಸಂಸ್ಥೆಯು ಸಂಖ್ಯೆ: 12394/1987 ರಂತೆ ಬಾಂಬೆ ಪಬ್ಲಿಕ್ ಸೊಸೈಟೀಸ್ ಆಕ್ಟ್, 1950 ರನ್ವಯ ನೋಂದಾಯಿಸಲ್ಪಟ್ಟಿದೆ. ಅರ್ಜಿದಾರರು ಪ್ರಾಜೆಕ್ಟ್ ವರದಿಯನ್ನು ಸಲ್ಲಿಸಿದ್ದು, ಅದು ಅರ್ಜಿದಾರರ ಉದ್ದೇಶಕ್ಕೆ ಪೂರಕವಾಗಿದೆ. ಪ್ರಸ್ತಾಪಿತ ಜಮೀನಿನ ಖಾತೆದಾರರಿಂದ ಜಮೀನನ್ನು ಖರೀದಿಸಲು ಕರಾರು ಮಾಡಿಕೊಂಡಿರುತ್ತಾರೆ.

ಪ್ರಸ್ತಾಪಿತ ಜಮೀನು ಕರ್ನಾಟಕ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್) ಅಧಿನಿಯಮ 1978, ಕರ್ನಾಟಕ ಭೂ ಮಂಜೂರಾತಿ ನಿಯಮಾವಳಿಗಳು, ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಕರ್ನಾಟಕ ಭೂಸುಧಾರಣೆ ಅಧಿನಿಯಮ, 1961ರ ಕಲಂ 109(1)(ii) ರ ಪ್ರಕಾರ ಶೈಕ್ಷಣಿಕ ಉದ್ದೇಶಕ್ಕೆ 4 ಯೂನಿಟ್‌ವರೆಗೆ ಜಮೀನನ್ನು ಹೊಂದಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆ ಕರ್ನಾಟಕ ಭೂಸುಧಾರಣೆ (ತಿದ್ದುಪಡಿ) ಅಧಿನಿಯಮ, 1995ರ ಕಲಂ 109(1)(ii) ಮತ್ತು ಕರ್ನಾಟಕ ಭೂಸುಧಾರಣೆ (ತಿದ್ದುಪಡಿ) ನಿಯಮಗಳು, 1996ರ ನಿಯಮ 38ಬಿ(2)(ಎ) ಮತ್ತು (ಬಿ) ರಲ್ಲಿನ ಷರತ್ತುಗಳನ್ನು ಪೂರೈಸಿದ್ದು, ಕರ್ನಾಟಕ ಭೂಸುಧಾರಣೆ ಅಧಿನಿಯಮ, 1961ರ ಕಲಂ 63, 79ಎ, 79ಬಿ ಮತ್ತು 80 ಕ್ಕೆ ವಿನಾಯಿತಿ ನೀಡಿ ಸೇಂಟ್ ಲಾರೆನ್ಸ್ ಎಜುಕೇಶನ್ ಸೊಸೈಟಿ, ಮುಂಬೈ ಇವರು ಬೆಂಗಳೂರು ಜಿಲ್ಲೆ, ಆನೇಕಲ್ ತಾಲೂಕು, ಜಿಗಣಿ ಹೋಬಳಿ, ಗೊಲ್ಲಹಳ್ಳಿ ಗ್ರಾಮದ ಸರ್ವೆ ನಂ. 13 ರಲ್ಲಿ 1 ಎಕರೆ 35 ಗುಂಟೆ, 14 ರಲ್ಲಿ 2 ಎಕರೆ 30 ಗುಂಟೆ ಮತ್ತು 15 ರಲ್ಲಿ 0–26 ಗುಂಟೆ ಹೀಗೆ ಒಟ್ಟು 5–14 ಎಕರೆ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಖರೀದಿಸಲು ಕರ್ನಾಟಕ ಭೂಸುಧಾರಣೆ ಅಧಿನಿಯಮ, 1961ರ ಕಲಂ 109(1)ರ ಅಡಿ ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟಂತೆ ಸರ್ಕಾರದ ಅನುಮತಿ ನೀಡಲಾಗಿದೆ:

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷಗಳೊಳಗಾಗಿ ಉಪಯೋಗಿಸತಕ್ಕದ್ದು ಮತ್ತು ಆ ಬಗ್ಗೆ ಜಿಲ್ಲಾಧಿಕಾರಿಗಳ ಮುಖಾಂತರ ಸರ್ಕಾರಕ್ಕೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.

2. ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ, ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ, 1956ರ ಕಲಂ 3 ರಲ್ಲಿ ಹೇಳಿರುವಂತೆ ಶೇಕಡ 55 ಪೇಯ್ಡ್ ಅಪ್ ಷೇರು ಬಂಡವಾಳ ಹೊಂದಿದ ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ನಿಯಂತ್ರಿತ ಅಥವಾ ಎರಡರ ಹಿಡಿತ ಹೊಂದಿರುವ ಸರ್ಕಾರದ ಸಂಘ/ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
3. ಸದರಿ ಜಮೀನು ಸಿ.ಡಿ.ಪಿ ಪ್ರಕಾರ ಹಸಿರು ವಲಯದಲ್ಲಿ ಬರುತ್ತಿದ್ದು ವಿದ್ಯಾ ಸಂಸ್ಥೆಗಳಿಗೆ ಉಪಯೋಗಿಸಿಕೊಳ್ಳಲು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಿಂದ ಭೂ ಬದಲಾವಣೆ ಮಾಡಿಕೊಳ್ಳತಕ್ಕದ್ದು.
4. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಕರ್ನಾಟಕ ಭೂ ಕಂದಾಯ ಅಧಿನಿಯಮ, 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯತಕ್ಕದ್ದು.
5. ಸಂಸ್ಥೆ ನಡೆಸುವ ಚಟುವಟಿಕೆಗಳು ಸ್ಥಳೀಯ ಕಾನೂನು, ಕರ್ನಾಟಕ ಮತ್ತು ಭಾರತ ಸರ್ಕಾರದ ಕಾನೂನುಗಳನ್ನು ಪಾಲಿಸತಕ್ಕದ್ದು.
6. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿ.ಡಿ.ಪಿ., ಓ.ಡಿ.ಪಿ. ಹಾಗೂ ಹಸಿರು ವಲಯ ವ್ಯಾಪ್ತಿಯೊಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.
7. ಈ ಅನುಮತಿ ಭೂಸುಧಾರಣೆ ಕಾಯ್ದೆ, 1961ರ ಕಲಂ 109 ರನ್ವಯ ಮಾತ್ರ ಮಾಡಿರುತ್ತದೆ. ಬೇರೆ ಕಾನೂನುಗಳಿಗೆ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.
8. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾಗಿರುವ ಅನುಮತಿಯನ್ನು ಕಾನೂನು ರೀತ್ಯ ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಿಕೊಳ್ಳಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1935

**ಬಿ. ಚಿಕ್ಕರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಭೂಸುಧಾರಣೆ)

**ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಯವರ ನ್ಯಾಯಾಲಯ, ಭದ್ರಾವತಿ ವಿಭಾಗ, ಭದ್ರಾವತಿ**

**ಸಂಖ್ಯೆ: ಬಿ3 ಸಿಓಎನ್ ಸಿಆರ್ 6/05-06, ದಿನಾಂಕ: 28ನೇ ನವೆಂಬರ್ 05**

ಭದ್ರಾವತಿ ವಿಭಾಗದ ವ್ಯಾಪ್ತಿಯಲ್ಲಿ ಶ್ರೀಗಂಧದ ಹಾಗೂ ಇತರೇ ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದ ವಾಹನಗಳನ್ನು ಅರಣ್ಯ ಸಿಬ್ಬಂದಿಯವರು ಸರ್ಕಾರದ ಪರ ಅಮಾನತ್ತು ಪಡಿಸಿಕೊಂಡು ಸದರಿ ವಾಹನವನ್ನು ಅರಣ್ಯ ಕಾಯ್ದೆ 1963 ಸೆಕ್ಷನ್ 71(ಎ)ರ ಪ್ರಕಾರ ಕ್ರಮ ಜರುಗಿಸುವಂತೆ ಈ ನ್ಯಾಯಾಲಯಕ್ಕೆ ಹಾಜರು ಪಡಿಸಲಾದ ವಾಹನದ ತಪಶೀಲು ಈ ಕೆಳಕಂಡಂತಿರುತ್ತದೆ.

| ಕ್ರಸಂ | ವಾಹನದ ವಿವರ | ಮೊಕದ್ದಮೆ ಸಂಖ್ಯೆ | ಯಂತ್ರದ ಸಂಖ್ಯೆ | ಇಂಜಿನ್ ಸಂಖ್ಯೆ |
|---|---|---|---|---|
| 1 | ಲಾರಿ ಸಂಖ್ಯೆ ಕೆಎ 20/5466 | ಭದ್ರಾವತಿ ವಲಯದ ಅರಣ್ಯ ಮೊಕದ್ದಮೆ ಸಂಖ್ಯೆ 48/05-06, ದಿ: 23.8.05 | 16 ಇಸಿ60 942331 | 4ಡಿ31ಎ60934958 |

ಈ ಮೇಲ್ಕಂಡ ವಾಹನದ ಬಗ್ಗೆ ಯಾರೂ ವಾರಸುದಾರರು ಇಲ್ಲಿಯವರೆಗೂ ಹಾಜರಾಗದೇ ಇರುವುದರಿಂದ ಸದರಿ ವಾಹನದ ನಿಜವಾದ ವಾರಸುದಾರರು ಯಾರಾದರೂ ಇದ್ದಲ್ಲಿ ಅವರು ವಾಹನಗಳ ಬಗ್ಗೆ ಅಧಿಕೃತ ಹಕ್ಕು ಭಾದ್ಯತೆಗಳನ್ನು ಕೆಳ ಸಹಿ ಮಾಡಿರುವವರ ಸಮ್ಮುಖದಲ್ಲಿ ಈ ಪ್ರಕಟಣೆಯು ಕರ್ನಾಟಕ ಸರ್ಕಾರದ ಗೆಜೆಟ್ ನಲ್ಲಿ ಪ್ರಕಟವಾದ ದಿನಾಂಕದಿಂದ ಮೂವತ್ತು (30) ದಿನಗಳ ಒಳಗೆ ಹಾಜರು ಪಡಿಸಬೇಕಾಗಿ ಮತ್ತು ವಾಹನವನ್ನು ಬೀಟೆ ತುಂಡುಗಳನ್ನು ಕಳ್ಳ ಸಾಗಾಣಿಕೆ ಮಾಡಲು ಉಪಯೋಗಿಸಿದ್ದಕ್ಕಾಗಿ ವಾಹನವನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದರ ಬಗ್ಗೆ ಅವರುಗಳ ಅಧಿಕೃತ ಸಮಜಾಯಿಸಿಯನ್ನು ಬರಹದ ಮೂಲಕ ಇತರೆ ದಾಖಲಾತಿಗಳೊಂದಿಗೆ ಈ ಕೆಳ ಸಹಿದಾರರ ಸಮ್ಮುಖದಲ್ಲಿ ಹಾಜರು ಪಡಿಸಲು ಈ ಮೂಲಕ ಪ್ರಕಟಿಸಲಾಗಿದೆ. ಈ ಮೇಲ್ಕಂಡ ವಾಹನದ ಬಗ್ಗೆ ಯಾವ ವಾರಸುದಾರರು ಮೇಲ್ಕಾಣಿಸಿದ ಅವಧಿಯೊಳಗೆ ಲಿಖಿತ ಮೂಲಕ ಯಾವುದೇ ಅರ್ಜಿಯನ್ನು ಈ ಕೆಳ ಸಹಿದಾರರಿಗೆ ಸಲ್ಲಿಸದೇ ಇದ್ದಲ್ಲಿ ವಾಹನವನ್ನು ಕರ್ನಾಟಕ ಅರಣ್ಯ ಕಾಯಿದೆ 1963ರ ಸೆಕ್ಷನ್ 71(ಎ) ಎರಡನೇ ತಿದ್ದುಪಡಿ ಪ್ರಕಾರ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,

ಪಿ.ಆರ್. 1936

ಭದ್ರಾವತಿ ವಿಭಾಗ, ಭದ್ರಾವತಿ.

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ**

**ಅಧಿಸೂಚನೆ**

**ಸಂಖ್ಯೆ: ಸಿಆಸುಇ 423 ಸಅಸೇ 2005, ಬೆಂಗಳೂರು, ದಿನಾಂಕ: 30ನೇ ನವೆಂಬರ್ 2005.**

ಶ್ರೀ ಎಂ.ಕೆ. ವೆಂಕಟರಾಮ್ ಲೋಕೋಪಯೋಗಿ ಇಲಾಖೆಯ ನಿವೃತ್ತ ಇಂಜಿನಿಯರ್ ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಅಥವಾ ಲೋಕೋಪಯೋಗಿ ಮತ್ತು ಇಂಧನ ಸಚಿವರ ಪದಾವಧಿಯವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮಾನ್ಯ ಸಚಿವರ ವಿಶೇಷ ಕರ್ತವ್ಯಾಧಿಕಾರಿಯಾಗಿ ಗುತ್ತಿಗೆ ಆಧಾರದ ಮೇಲೆ ನೇಮಿಸಲಾಗಿದೆ.

ಸದರಿ ನೇಮಕಾತಿಯ ಷರತ್ತು ಮತ್ತು ನಿಬಂಧನೆಗಳನ್ನು ಪ್ರತ್ಯೇಕವಾಗಿ ಹೊರಡಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1939

**ಯು.ಪಿ. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಸೇವೆಗಳು-2).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ

## ಅಧಿಸೂಚನೆ

**ಸಂಖ್ಯೆ: ಸಿಆಸುಇ 48 ಇಆತ 2004, ಬೆಂಗಳೂರು, ದಿನಾಂಕ: 30ನೇ ನವೆಂಬರ್ 2005.**

ಮೈಸೂರು ಜಿಲ್ಲಾ ತರಬೇತಿ ಸಂಸ್ಥೆಯಲ್ಲಿ ಪತ್ರಾಂಕಿತ ಬೋಧಕರಾಗಿ ಕಾರ್ಯ ನಿರ್ವಹಿಸುತ್ತಿರುವ ಶ್ರೀ ಹೆಚ್.ಎನ್. ನಟರಾಜ್ ಅವರಿಗೆ ಪದೋನ್ನತಿ ನೀಡಿ, ಅವರನ್ನು ಶಿವಮೊಗ್ಗ ಜಿಲ್ಲಾ ತರಬೇತಿ ಸಂಸ್ಥೆಯ ಪ್ರಾಚಾರ್ಯರ ಹುದ್ದೆಗೆ ಹಾಗೂ ಮಂಗಳೂರು ಜಿಲ್ಲಾ ತರಬೇತಿ ಸಂಸ್ಥೆಯಲ್ಲಿ ಬೋಧಕರಾಗಿ ಕಾರ್ಯ ನಿರ್ವಹಿಸುತ್ತಿರುವ ಶ್ರೀ ಎನ್. ದೇವೇಂದ್ರ ಪ್ರಭು ಅವರಿಗೆ ಪದೋನ್ನತಿ ನೀಡಿ, ಅವರನ್ನು ಚಿಕ್ಕಮಗಳೂರು ಜಿಲ್ಲಾ ತರಬೇತಿ ಸಂಸ್ಥೆಯ ಉಪಪ್ರಾಚಾರ್ಯರ ಹುದ್ದೆಗೆ, ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ, ನೇಮಕ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್.ಕೆ. ಅನಸೂಯ**

ಪಿ.ಆರ್. 1940

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ತರಬೇತಿ).

## ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪನಿರ್ದೇಶಕರ ಕಾರ್ಯಾಲಯ ಕೊಪ್ಪಳ

## ಪ್ರಕಟಣೆ

**ಸಂ : ಸಿವಿ1 : ಪ್ರಾಶಿ : ನೇಮಕ : 30 : 2005-06, ದಿನಾಂಕ: 05ನೇ ಡಿಸೆಂಬರ್ 2005.**

2005-06ನೇ ಸಾಲಿನ ಸರ್ಕಾರಿ ಪ್ರಾಥಮಿಕ ಶಾಲಾ ಶಿಕ್ಷಕರ ನೇಮಕಾತಿ ಅಧಿಸೂಚನೆ ಮತ್ತು ಅರ್ಜಿ ಸಹಿತ ಮಾಹಿತಿ ಪುಸ್ತಕ ಅಧ್ಯಾಯ-2ರ ಪುಟ ಸಂಖ್ಯೆ 14ರ 6(1)(ಎ)(3)ರ ಮೀಸಲಾತಿಯನ್ನು ಶಿಕ್ಷಕರ ನೇಮಕಾತಿಗೆ ಅವಕಾಶವಿಲ್ಲವೆಂದು "ಹಿಂತೆಗೆದುಕೊಳ್ಳಲಾಗಿದೆ"

6) ಪ್ರತಿ ಪ್ರವರ್ಗದಲ್ಲಿ ವಿವಿಧ ಗುಂಪುಗಳಿಗೆ ಮೀಸಲಾತಿ ಪ್ರಮಾಣ

1. ಅಂಗವಿಕಲ ಗುಂಪಿಗೆ ಕೆಳಗಿನವರು ಶಿಕ್ಷಕರ ನೇಮಕಾತಿಗೆ ಅರ್ಹರಾಗುತ್ತಾರೆ.

   **ವಿವರಣೆ:** ಅಂಗವಿಕಲ ಅಭ್ಯರ್ಥಿ ಎಂದರೆ (ಎ) 1 ಕಣ್ಣಿನ ದೃಷ್ಟಿಯನ್ನು ಸರಿಪಡಿಸುವ ಕನ್ನಡಕವನ್ನು ಹಾಕಿದಾಗ ಎರಡೂ ಕಣ್ಣಿನ ಪೈಕಿ ಉತ್ತಮವಾದ ಕಣ್ಣಿನಲ್ಲಿ 6:60 ಅಥವಾ 20:2000 (ಸ್ನಲನ್) ಅನ್ನು ಮೀರದಿರುವ ದೃಷ್ಟಿ ಸಾಮರ್ಥ್ಯ ಇರುವ ವ್ಯಕ್ತಿ.

ಅಥವಾ

2. 20 ಡಿಗ್ರಿಗಳು ಅಥವಾ ಅದಕ್ಕೂ ಕಡಿಮೆಯ ಕೋನದವರೆ ವಿಸ್ತರಿಸುವ ದೃಷ್ಟಿ ಕ್ಷೇತ್ರದ ಪರಿಮಿತಿಯನ್ನು ಹೊಂದಿರುವ ವ್ಯಕ್ತಿ.
3. ಸಂಪೂರ್ಣವಾಗಿ ದೃಷ್ಟಿ ಸಾಮರ್ಥ್ಯವನ್ನು ಕಳೆದು ಕೊಂಡಿರುವ ವ್ಯಕ್ತಿಯು ಶಿಕ್ಷಕರ ನೇಮಕಾತಿಗೆ ಪರಿಗಣಿಸಲಾಗುವುದಿಲ್ಲ.

ಪಿ.ಆರ್. 1941

ಆಯ್ಕೆ ಪ್ರಾಧಿಕಾರಿ ಹಾಗೂ ಉಪನಿರ್ದೇಶಕರು (ಆಡಳಿತ)

ಸಾರ್ವಜನಿಕ ಶಿಕ್ಷಣ ಇಲಾಖೆ ಕೊಪ್ಪಳ ಜಿಲ್ಲೆ.

## ಉಪ ನಿರ್ದೇಶಕರ ಕಛೇರಿ, ಸಾರ್ವಜನಿಕ ಶಿಕ್ಷಣ ಇಲಾಖೆ ಚಿತ್ರದುರ್ಗ

**ಸಂ : ಇ2 / ಪ್ರಾಶಾಶಿ / ನೇ / ಸಿಆರ್ / 01 / 2005-06, ದಿನಾಂಕ: 03ನೇ ಡಿಸೆಂಬರ್ 2005.**

**ವಿಷಯ:** 2005-06ನೇ ಸಾಲಿನ ಪ್ರಾಥಮಿಕ ಶಾಲಾ ಶಿಕ್ಷಕರ ನೇಮಕಾತಿ ಕುರಿತು.

**ಉಲ್ಲೇಖ:** 1) ನಿರ್ದೇಶಕರು (ಪ್ರೌಢ ಶಿಕ್ಷಣ) ಆಯುಕ್ತರ ಕಛೇರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರ ಪ.ಸಂ: ಸಿ3(1) ಪ್ರಾಶಿ / ನೇ / 20 / 2004-05 ದಿ: 18.11.2005.

2005-06ನೇ ಸಾಲಿನ ಸರ್ಕಾರಿ ಪ್ರಾಥಮಿಕ ಶಾಲಾ ಶಿಕ್ಷಕರ ನೇಮಕಾತಿ ಅಧಿಸೂಚನೆ ಮತ್ತು ಅರ್ಜಿ ಸಹಿತ ಮಾಹಿತಿ ಪುಸ್ತಕ ಅಧ್ಯಾಯ-2ರ ಪುಟ ಸಂಖ್ಯೆ 14ರ 6(1)(ಎ)(3)ರ ಮೀಸಲಾತಿಯನ್ನು ಶಿಕ್ಷಕರ ನೇಮಕಾತಿಗೆ ಅವಕಾಶವಿಲ್ಲವೆಂದು "ಹಿಂತೆಗೆದುಕೊಳ್ಳಲಾಗಿದೆ"

6) ಪ್ರತಿ ವರ್ಗದಲ್ಲಿ ವಿವಿಧ ಗುಂಪುಗಳಿಗೆ ಮೀಸಲಾತಿ ಪ್ರಮಾಣ

1. ಅಂಗವಿಕಲ ಗುಂಪಿಗೆ ಕೆಳಗಿನವರು ಶಿಕ್ಷಕರ ನೇಮಕಾತಿಗೆ ಅರ್ಹರಾಗುತ್ತಾರೆ.

   **ವಿವರಣೆ:** ಅಂಗವಿಕಲ ಅಭ್ಯರ್ಥಿ ಎಂದರೆ (ಎ) 1 ಕಣ್ಣಿನ ದೃಷ್ಟಿಯನ್ನು ಸರಿಪಡಿಸುವ ಕನ್ನಡಕವನ್ನು ಹಾಕಿದಾಗ ಎರಡೂ ಕಣ್ಣಿನ ಪೈಕಿ ಉತ್ತಮವಾದ ಕಣ್ಣಿನಲ್ಲಿ 6-60 ಅಥವಾ 29/0:2000 (ಸ್ನಲನ್) ಅನ್ನು ಮೀರದಿರುವ ದೃಷ್ಟಿ ಸಾಮರ್ಥ್ಯ ಇರುವ ವ್ಯಕ್ತಿ.

ಅಥವಾ

2. 20 ಡಿಗ್ರಿಗಳು ಅಥವಾ ಅದಕ್ಕೂ ಕಡಿಮೆಯ ಕೋನದವರೆ ವಿಸ್ತರಿಸುವ ದೃಷ್ಟಿ ಕ್ಷೇತ್ರದ ಪರಿಮಿತಿಯನ್ನು ಹೊಂದಿರುವ ವ್ಯಕ್ತಿ.
3. ಸಂಪೂರ್ಣವಾಗಿ ದೃಷ್ಟಿ ಸಾಮರ್ಥ್ಯವನ್ನು ಕಳೆದು ಕೊಂಡಿರುವ ವ್ಯಕ್ತಿಯು ಶಿಕ್ಷಕರ ನೇಮಕಾತಿಗೆ ಪರಿಗಣಿಸಲಾಗುವುದಿಲ್ಲ.

**ಎಂ.ಪಿ. ದೇಶಪಾಂಡೆ**

ಪಿ.ಆರ್. 1942

ಆಯ್ಕೆ ಪ್ರಾಧಿಕಾರಿ ಹಾಗೂ ಉಪನಿರ್ದೇಶಕರು (ಆಡಳಿತ)

ಸಾರ್ವಜನಿಕ ಶಿಕ್ಷಣ ಇಲಾಖೆ ಚಿತ್ರದುರ್ಗ.

ಹಸ್ತಾಂತರ ಪಡೆದ ಅಬಕಾರಿ ಉಪ ನಿರೀಕ್ಷಕರು, ಜಾರಿ ಮತ್ತು ತನಿಖೆ, ಸಂ:1, ವಿರಾಜಪೇಟೆ ತಾಲ್ಲೂಕು ಇವರು ತನಿಖೆಯನ್ನು ಪ್ರಾರಂಭಿಸಿ ವಶಪಡಿಸಿಕೊಂಡ ಸಾರಾಯಿಯಿಂದ ಮಾದರಿಯಾಗಿ ತೆಗೆದ ಸಾರಾಯಿ ಸ್ಯಾಂಪಲ್‌ಗಳನ್ನು ರಾಸಾಯನಿಕ ತಜ್ಞರು, ಮಂಗಳೂರು ಇವರಲ್ಲಿ ರಾಸಾಯನಿಕ ಪರೀಕ್ಷೆಗೆ ಒಳಪಡಿಸಿದ್ದು, ಇವರ ಪತ್ರ ಸಂ: ಬಿ723 / 7.8.04 ರಲ್ಲಿ ಸಾರಾಯಿಯ ಮದ್ಯಸಾರ ಪ್ರಮಾಣ 32.0% ಇರುವುದಾಗಿ ದೃಡೀಕರಣ ಪತ್ರ ನೀಡಿದ್ದು, ಸಾರಾಯಿ ಎಂದು ದೃಢಪಟ್ಟಿರುತ್ತದೆ.

ಸದರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಸ್ಕೂಟರಿನ ಆರ್.ಸಿ. ಮಾಲೀಕರನ್ನು ಪತ್ತೆ ಹಚ್ಚಲು ಬಿ ಎಕ್ಸ್ಟ್ರ್ಯಾಕ್ಟ್ ವರದಿಯನ್ನು ಕೋರಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ರಾಜಾಜಿನಗರ, ಬೆಂಗಳೂರು (ಸೌತ್) ಇವರಿಗೆ ದಿ: 26.2.05 ರಂದು ಪತ್ರ ಬರೆಯಲಾಗಿತ್ತು. ಅವರಿಂದ ದಿ: 11.3.05 ರಲ್ಲಿ ಬಿ ಎಕ್ಸ್ಟ್ರ್ಯಾಕ್ಟ್ ಮಾಹಿತಿಯನ್ನು ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ. ಬಿ ಎಕ್ಸ್ಟ್ರ್ಯಾಕ್ಟ್ ವರದಿಯ ಪ್ರಕಾರ ಶ್ರೀ ಆರಾಧ್ಯ, ತಂದೆ ಶ್ರೀ ರಾಮರಾಧ್ಯ, ಸಂ: 445, 8ನೇ ಮುಖ್ಯ ರಸ್ತೆ, 7ನೇ ಕ್ರಾಸ್, ಹನುಮಂತನಗರ, ಬೆಂಗಳೂರು ಇವರು ವಾಹನದ ಅಧಿಕೃತ ಮಾಲೀಕರಾಗಿದ್ದು, ಇವರಿಗೆ ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 1965ರ ಕಲಂ 43 ಬಿ ರನ್ವಯ ಕಾರಣ ಕೇಳಿ ನೋಟೀಸನ್ನು ದಿ: 13.7.05 ರಂದು ನೀಡಲಾಗಿರುತ್ತದೆ. ಸದರಿ ಪತ್ರ ಹಿಂದಿರುಗಿ ಬಂದಿರುತ್ತದೆ. ಸದರಿ ಪತ್ರಕ್ಕೆ ಯಾವುದೇ ಪ್ರತಿಕ್ರಿಯೆ ನೀಡದಿದ್ದರಿಂದ ದಿ: 10.11.05 ರಂದು ನೋಂದಣಿ ಅಂಚೆಯ ಮೂಲಕ ಇದೇ ವಿಳಾಸಕ್ಕೆ ಮರು ಪತ್ರ ಬರೆಯಲಾಗಿರುತ್ತದೆ. ನೋಂದಣಿ ಅಂಚೆ ಜಾರಿ ಆಗದೆ ಸದರಿ ವಿಳಾಸದವರು ಸದರಿ ಸ್ಥಳದಲ್ಲಿ ಇಲ್ಲವಾಗಿ ಅಂಚೆ ಸ್ವೀಕೃತಿಯಾಗದೆ ಬಂದಿರುತ್ತದೆ.

ಸದರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಎರಡನೇ ವಾಹನ ಯಿರ್ಯಿಬ್ಡಿ ಬೈಕ್ ನಂ: ಸಿಎನ್‌ವಿ : 5133 ಎರಡು ಆರ್.ಸಿ. ಮಾಲೀಕರನ್ನು ತಿಳಿಯಲು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಕೊಡಗು ಜಿಲ್ಲೆ ಮಡಿಕೇರಿ ರವರಿಗೆ ಪತ್ರ ಬರೆಯಲಾಗಿದ್ದು, ಅವರಿಂದ ದಿ: 11.3.2005 ರಲ್ಲಿ ಸದರಿ ನೋಂದಣಿ ಸಂಖ್ಯೆಯ ವಾಹನವು ಈ ಕಛೇರಿಯ ವ್ಯಾಪ್ತಿಗೆ ಸೇರ್ಪಡೆಗೊಂಡಿರುವುದಿಲ್ಲ ಎಂಬುವುದಾಗಿ ದೃಢೀಕರಣ ಪತ್ರ ನೀಡಿರುತ್ತಾರೆ. ಆದುದರಿಂದ ಸದರಿ ವಾಹನದ ಆರ್.ಸಿ. ಮಾಲಿಕರು ಪತ್ತೆಯಾಗದ ಕಾರಣ ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ ಕಲಂ 43 ಬಿ ರ ಪ್ರಕಾರ ಕ್ರಮ ತೆಗೆದುಕೊಳ್ಳಲು ಸಾಧ್ಯವಾಗಿರುವುದಿಲ್ಲ.

ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಎರಡು ದ್ವಿ ಚಕ್ರ ವಾಹನಗಳಾದ ಸ್ಕೂಟರ್ ಸಂ: ಸಿಎ : 6588 ಮತ್ತು ಯಿರ್ಯಿಬ್ಡಿ ಬೈಕ್ ನಂ: ಸಿಎನ್‌ವಿ: 5133 ರನ್ನು ವಶಪಡಿಸಿಕೊಂಡು ಸುಮಾರು 11 ತಿಂಗಳು ಕಳೆದರೂ ಯಾವುದೇ ವ್ಯಕ್ತಿಯು ಈ ಪ್ರಾಧಿಕಾರದ ಮುಂದೆ ಹಾಜರಾಗಿ ವಾಹನಗಳು ತನ್ನದೆಂದು ಕೋರಿ ವಾಹನದ ಮಾಲೀಕರಾಗಲೀ ಅವರ ಪರ ವಕೀಲರಾಗಲೀ ಈ ಪ್ರಾಧಿಕಾರದ ಮುಂದೆ ಹಾಜರಾಗಿರುವುದಿಲ್ಲ.

ಸದರಿ ಪ್ರಕರಣದಲ್ಲಿ ಅಬಕಾರಿ ಉಪ ನಿರೀಕ್ಷಕರು, ಸಂಚಾರಿದಳ, ವಿರಾಜಪೇಟೆ ಇವರು ಅಕ್ರಮವಾಗಿ 300 x 100 ಎಂ.ಎಲ್. ಪ್ಯಾಕೇಟುಗಳನ್ನು ಸಾಗಾಣಿಕೆ ಮಾಡುವಾಗ ವಾಹನಗಳನ್ನು ಪಂಚನಾಮೆಯ ಮುಖಾಂತರ ಸ್ವಾಧೀನ ಪಡಿಸಿದ್ದು ಹಾಗೂ ವಾಹನದಲ್ಲಿ ಜಪ್ತು ಮಾಡಲ್ಪಟ್ಟಿರುವ ವಸ್ತು ರಾಸಾಯನಿಕ ತಜ್ಞರ ಪ್ರಕಾರ ಸಾರಾಯಿಯಾಗಿದ್ದು, ಸದರಿ ವಾಹನವನ್ನು ಕರ್ನಾಟಕ ಅಬಕಾರಿ ಕಾಯ್ದೆ ಕಾನೂನಿನ ಉಲ್ಲಂಘನೆಗಾಗಿ ಬಳಸಿರುವುದು ಮಾಲೀಕರ ತಿಳುವಳಿಕೆಯಿಂದಲೇ ಎಂಬುದು ಸಾಬೀತಾಗಿರುತ್ತದೆ.

ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43 ರಡಿಯಲ್ಲಿ ಪ್ರಕರಣವನ್ನು ದಾಖಲು ಮಾಡುವಲ್ಲಿ ಆರೋಪಿಗಳು ಪತ್ತೆಯಾಗದಿದ್ದಲ್ಲಿ, ಅಥವಾ ಪತ್ತೆಯಾಗುವ ಸಾಧ್ಯತೆಗಳು ಇಲ್ಲದಿದ್ದಲ್ಲಿ ಹಾಗೂ ಜಪ್ತು ಮಾಡಲಾದ ವಾಹನವನ್ನು ಜಪ್ತುಪಡಿಸಿದ ಒಂದು ತಿಂಗಳೊಳಗೆ ಯಾವುದೇ ವ್ಯಕ್ತಿಯು ವಾಹನಕ್ಕೆ ಸಂಬಂಧಿಸಿದ ಕಾನೂನುಬದ್ಧವಾದ ದಾಖಲೆಗಳೊಂದಿಗೆ ಮಾಲೀಕತ್ವವನ್ನು ಕೋರಿ ಪ್ರಾಧಿಕಾರದ ಮುಂದೆ ಬಾರದಿದ್ದಲ್ಲಿ ಮತ್ತು ಸದರಿ ಸ್ವತ್ತುಗಳು ಕರ್ನಾಟಕ ಅಬಕಾರಿ ಕಾಯಿದೆ 1965, ಕಲಂ 43ಸಿ ರಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾದಂತಹ ಸ್ವತ್ತುಗಳಾಗಿದ್ದಲ್ಲಿ ಈ ಪ್ರಾಧಿಕಾರವು ಅಕ್ರಮ ಮದ್ಯ ಸಾಗಾಣಿಕೆಗೆ ಬಳಸಿದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿದೆ.

ಈ ಮೇಲಿನ ಅಂಶಗಳನ್ನು ಪರಿಶೀಲನೆ ಮಾಡಿದಾಗ ಸದರಿ ಮೊಕದ್ದಮೆಯಲ್ಲಿ ಸ್ಕೂಟರ್ ಸಂ: ಸಿಎಬಿ 6588 ಮತ್ತು ಯಿರ್ಯಿಬ್ಡಿ ಬೈಕ್ ನಂ: ಸಿಎನ್‌ವಿ : 5133 ರನ್ನು ವಶಪಡಿಸಿಕೊಂಡು ಸುಮಾರು 11 ತಿಂಗಳುಗಳಿಗಿಂತ ಹೆಚ್ಚು ಸಮಯವಾಗಿದ್ದು, ಯಾವುದೇ ವ್ಯಕ್ತಿಯು ಸೂಕ್ತ ದಾಖಲಾತಿಗಳೊಂದಿಗೆ ವಾಹನಗಳ ಮಾಲೀಕತ್ವವನ್ನು ಕೋರಿ ಈ ಪ್ರಾಧಿಕಾರದ ಮುಂದೆ ಹಾಜರಾಗಿರುವುದಿಲ್ಲ. ಹಾಗೂ ವಾಹನಗಳ ಮಾಲೀಕರಿಗೆ ಈ ಪ್ರಾಧಿಕಾರದ ಕಾರಣ ಕೇಳಿ ನೋಟೀಸ್ ನೀಡಿದರೂ ಸಹಾ ಸ್ವೀಕೃತಿಯಾಗದೆ ವಾಪಸ್ ಬಂದಿರುತ್ತದೆ. ಆದುದರಿಂದ ವಾಹನಗಳ ಮಾಲೀಕರು ಅವರ ತಿಳುವಳಿಕೆಯಿಂದಲೇ ಈ ಕೃತ್ಯಕ್ಕೆ ಶಾಮೀಲಾಗಿರುವುದು ಸ್ಪಷ್ಟವಾಗಿ ಕಾಣಬರುತ್ತದೆ.

ಸದರಿ ವಾಹನವು ಚಾಲನೆ ಸ್ಥಿತಿಯಲ್ಲಿಲ್ಲದೆ ನಿಂತಲ್ಲೇ ನಿಂತು ತುಕ್ಕು ಹಿಡಿದು ಹಾಳಾಗಿರುತ್ತದೆ. ಮತ್ತು ಇನ್ನು ಹೆಚ್ಚು ಸಮಯ ಇರಿಸಿಕೊಂಡರೆ ಇನ್ನಷ್ಟು ಶಿಥಿಲಗೊಂಡು ಹಾಳಾಗುವ ಸಾಧ್ಯತೆ ಇರುವುದರಿಂದ ಸರ್ಕಾರಕ್ಕೆ ಬರುವ ಆದಾಯ ಕಡಿಮೆಯಾಗುವ ಸಾಧ್ಯತೆ ಇರುವುದರಿಂದ ಸದರಿ ದ್ವಿ ಚಕ್ರ ವಾಹನಗಳಾದ ಸ್ಕೂಟರ್ ಸಂ: ಸಿಎಬಿ : 6588 ಮತ್ತು ಯಿರ್ಯಿಬ್ಡಿ ಬೈಕ್ ನಂ: ಸಿಎನ್‌ವಿ : 5133 ರನ್ನು ಮತ್ತು 300 x 100 ಎಂ.ಎಲ್. ಸಾರಾಯಿ ಪ್ಯಾಕೇಟುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವೆಂಬ ಹಿನ್ನಲೆಯಲ್ಲಿ ಈ ಆದೇಶ.

**ಆದೇಶ**

ಎನ್.ಎಂ. ಹುಸೇನ್, ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ಕೊಡಗು ಜಿಲ್ಲೆ, ಮಡಿಕೇರಿ, ಆದ ನಾನು ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಲಂ 43(ಎ) ನಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ನಿಯಮ 43(ಬಿ) ರನ್ವಯ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿದ ನಂತರ ಅಬಕಾರಿ ಉಪ ನಿರೀಕ್ಷಕರು, ಸಂಚಾರಿದಳ, ವಿರಾಜಪೇಟೆ ಇವರ ಮೊಕದ್ದಮೆ ಸಂ: 16 / 2004-05 ದಿ: 20.2.2005 ರಂದು ಜಪ್ತುಪಡಿಸಿಕೊಂಡ ಸ್ಕೂಟರ್ ಸಂ: ಸಿಎಬಿ : 6588 ರನ್ನು ಮತ್ತು ಯಿರ್ಯಿಬ್ಡಿ ಬೈಕ್ ನಂ: ಸಿಎನ್‌ವಿ : 5133 ರನ್ನು ಮತ್ತು ಮೊಕದ್ದಮೆಯಲ್ಲಿ ವಶಪಡಿಸಿಕೊಂಡ 300 x 100 ಎಂ.ಎಲ್. ಸಾರಾಯಿ ಸ್ಯಾಚೆಟ್‌ಗಳು ರಾಸಾಯನಿಕ ದೃಢೀಕರಣದ ಪ್ರಕಾರ 32.0 ಸಾಂದ್ರತೆ ಹೊಂದಿದ್ದು, ಸಾರ್ವಜನಿಕರ ಸೇವನೆಗೆ ಯೋಗ್ಯವಲ್ಲದ್ದರಿಂದ ವಿಶ್ಲೇಷಣೆಗೆ ತೆಗೆದ ಸ್ಯಾಂಪಲ್‌ಗಳನ್ನು ಹೊರತುಪಡಿಸಿ 297 ಸಾರಾಯಿ ಸ್ಯಾಚೆಟ್‌ಗಳನ್ನು ಕರ್ನಾಟಕ ಅಬಕಾರಿ ಕಾಯಿದೆ ಕಲಂ 43 ಸಿ ಅನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡ ಸಾರಾಯಿ ಸ್ಯಾಚೇಟುಗಳು ರಾಸಾಯನಿಕ ವಿಶ್ಲೇಷಕರ ಪ್ರಕಾರ ಅಬಕಾರಿ ಭದ್ರತಾ ಉಗ್ರಾಣದಲ್ಲಿ ತಯಾರಿಸಿದ ಬಗ್ಗೆ ಯಾವುದೇ ಚಿಹ್ನೆ ಇರುವುದಿಲ್ಲ. ಸದರಿ ಸಾರಾಯಿ ಪ್ಯಾಕೇಟುಗಳನ್ನು ಸಾರ್ವಜನಿಕರಿಗೆ ವಿತರಿಸಲು ಸಾಧ್ಯವಾಗದ ಕಾರಣ ನಿಯಮ 43ಎ(3) ರನ್ವಯ ಅಬಕಾರಿ ಉಪ ಅಧೀಕ್ಷಕರು (ಪ್ರಭಾರ), ವಿರಾಜಪೇಟೆ ಉಪ ವಿಭಾಗ ಇವರ ಸಮಕ್ಷಮ ಸೂಕ್ತ ಮಹಜರ್ ಜರುಗಿಸಿ ನಾಶಪಡಿಸಲು ಆದೇಶಿಸಿದೆ.

ಮುಟ್ಟುಗೋಲು ಹಾಕಿಕೊಳ್ಳಲಾಗಿರುವ ವಾಹನಗಳನ್ನು 30 ದಿನಗಳು ಕಳೆದ ನಂತರ ಕರ್ನಾಟಕ ಅಬಕಾರಿ (ಮುಟ್ಟುಗೋಲು ಸ್ವತ್ತುಗಳ ವಿಲೇವಾರಿ) ನಿಯಮಗಳ 1967 ರ ಅನುಸಾರ ಬಹಿರಂಗ ಹರಾಜು ಮೂಲಕ ವಿಲೇಗೊಳಿಸಲು ಆದೇಶಿಸಿದೆ.

ಈ ಆದೇಶ ಇಂದು ಅಂದರೆ 25.11.05 ರಂದು ಬೆರಳಚ್ಚು ಮಾಡಿ ಬೆರಳಚ್ಚು ಮಾಡಿದ ಪ್ರತಿಯನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು. ಈ ಆದೇಶ ಇಂದಿನಿಂದ 30 ದಿವಸಗಳ ನಂತರ ಜಾರಿಗೆ ಬರುವುದು.

ಅಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು,
ಕೊಡಗು ಜಿಲ್ಲೆ, ಮಡಿಕೇರಿ.

ಪಿ.ಆರ್. 1995

**ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ಇ.ಐ.ಬಿ., ಕೊಡಗು ಜಿಲ್ಲೆ, ಮಡಿಕೇರಿ ಇವರ ನ್ಯಾಯಾಲಯದಲ್ಲಿ**

**ನಂ: ಇಕ್ಸ್‌ಇ : 3 : ಸಿಆರ್‌ಎಂ : 19 : 2005-06, ದಿನಾಂಕ: 22ನೇ ನವೆಂಬರ್ 2005**

ಉಪಸ್ಥಿತರು : ಎನ್.ಎಂ. ಹುಸೇನ್,
ಅಧಿಕೃತ ಅಧಿಕಾರಿ ಹಾಗೂ
ಅಬಕಾರಿ ಅಧೀಕ್ಷಕರು ವಿಚಕ್ಷಣದಳ (ಇಐಬಿ),
ಕೊಡಗು ಜಿಲ್ಲೆ, ಮಡಿಕೇರಿ.

**ಫಿರ್ಯಾದುದಾರರು :**
ಅಬಕಾರಿ ನಿರೀಕ್ಷಕರು
ಮಡಿಕೇರಿ ವಲಯ

**ವಿರುದ್ಧ**

**ಅಪರಾಧಿಗಳು :**
ಎ1) ಲೋಕೇಶ್ ಕೆ.ಆರ್.
ತಂದೆ ರಾಮಚಂದ್ರ ಕೆ.ಟಿ.
ವಾಸ ಕಣಿವೆ ಗ್ರಾಮ, ಕೂಡಿಗೆ ಅಂಚೆ.
ಎ2) ಕೆ.ವಿ. ಮಹೇಂದ್ರ, ತಂದೆ ವೆಂಕಟರಮಣ,
ಕುಶಾಲನಗರ, ಮನೆ ನಂ: 31/ 2,
ಗೌಡ ಸಮಾಜದ ಹತ್ತಿರ, ಕುಶಾಲನಗರ.
**ವಾಹನದ ಮಾಲೀಕರು**
ಕೆ.ಆರ್. ಲೋಕೇಶ್,
ತಂದೆ ರಾಮಚಂದ್ರ ಕೆ.ಟಿ.
ಕಣಿವೆ ಗ್ರಾಮ, ಕೂಡಿಗೆ ಅಂಚೆ,
ಸೋಮವಾರಪೇಟೆ ತಾಲ್ಲೂಕು.

**ಪ್ರಕರಣದ ಮುಖ್ಯಾಂಶಗಳು :**

ದಿ: 22.7.2005 ರಂದು ಸಾಯಂಕಾಲ 4-30 ರ ಸಮಯದಲ್ಲಿ ಫಿರ್ಯಾದುದಾರರಾದ ಅಬಕಾರಿ ನಿರೀಕ್ಷಕರು, ಮಡಿಕೇರಿ ವಲಯ ಇವರು ತಮ್ಮ ಸಿಬ್ಬಂದಿಯವರೊಡನೆ ಮಡಿಕೇರಿ ತಾಲ್ಲೂಕು ಬೊಯಿಕೇರಿ ಗ್ರಾಮದ ಸಿಂಕೋನ ತೋಟದ ಹತ್ತಿರ ಬಸ್ ನಿಲ್ದಾಣದ ಪಕ್ಕದಲ್ಲಿ ರಸ್ತೆ ಕಾವಲು ನಡೆಸುತ್ತಿದ್ದ ಸಮಯದಲ್ಲಿ ಕುಶಾಲನಗರದಿಂದ ಮಡಿಕೇರಿ ಕಡೆಗೆ ಒಂದು ಬಿಳಿಬಣ್ಣದ ಮಾರುತಿ ಕಾರ್ ಬರುತ್ತಿದ್ದು, ಸದರಿ ವಾಹನದಲ್ಲಿ ಅಕ್ರಮ ಮದ್ಯ ಸಾಗಾಣಿಕೆ ಮಾಡುತ್ತಿರಬಹುದೆಂಬ ಸಂಶಯದ ಮೇರೆಗೆ ವಾಹನವನ್ನು ತಡೆದು ಪರಿಶೀಲಿಸಲಾಗಿ ವಾಹನದ ನೋಂದಣಿ ಸಂಖ್ಯೆ : CKW - 2167 ಇರುವುದನ್ನು ಗಮನಿಸಿರುತ್ತಾರೆ. ಸದರಿ ವಾಹನದಲ್ಲಿದ್ದ ಇಬ್ಬರು ವ್ಯಕ್ತಿಗಳ ಪೈಕಿ ವಾಹನ ಚಾಲನೆ ಮಾಡುತ್ತಿದ್ದ ಕೆ.ವಿ. ಮಹೇಂದ್ರ ಎಂಬುವವನನ್ನು ವಾಹನದಲ್ಲಿ ಏನಿದೆ ಎಂಬುದಾಗಿ ಪ್ರಶ್ನಿಸಲಾಗಿ ಮದ್ಯವನ್ನು ತುಂಬಿದ ರಟ್ಟಿನ ಪೆಟ್ಟಿಗೆಗಳು ಇರುವುದಾಗಿ ತಿಳಿಸಿರುತ್ತಾರೆ. ವಾಹನದಲ್ಲಿದ್ದ ಮದ್ಯದ ಪೆಟ್ಟಿಗೆಗಳನ್ನು ಪರಿಶೀಲಿಸಲಾಗಿ,

1) ಮೂರು ರಟ್ಟಿನ ಪೆಟ್ಟಿಗೆಗಳಲ್ಲಿ ಒರಿಜಿನಲ್ ಚಾಯ್ಸ್ ವಿಸ್ಕಿ 180 m.l. x 144 ಬಾಟಲಿಗಳು

2) ಎರಡು ರಟ್ಟಿನ ಪೆಟ್ಟಿಗೆಗಳಲ್ಲಿ ಓಲ್ಡ್ ಮಂಕ್ ರಂ 180 m.l. x 96 ಬಾಟಲಿಗಳು

3) ಎರಡು ರಟ್ಟಿನ ಪೆಟ್ಟಿಗೆಗಳಲ್ಲಿ ಎಂ.ಸಿ.ಬಿ. ಬ್ರಾಂಡಿ 180 m.l. x 96 ಬಾಟಲಿಗಳು

ಇವುಗಳು ಸಾಗಾಣಿಕೆಯಾಗುತ್ತಿದ್ದುದು ಕಂಡು ಬಂದಿರುತ್ತದೆ. ಸದರಿ ಮದ್ಯದ ಸರಕನ್ನು ಸಾಗಿಸಲು ಯಾವುದೇ ಅನುಮತಿ ಪತ್ರ ಹಾಗೂ ರಹದಾರಿ ಇದೆಯೇ ಎಂದು ಕೇಳಲಾಗಿ ಅಂತಹ ಯಾವುದೇ ಅಧಿಕೃತ ದಾಖಲಾತಿಗಳು ಇರುವುದಿಲ್ಲವೆಂದು ವಾಹನದ ಚಾಲಕನು ಹೇಳಿಕೆ ನೀಡಿರುತ್ತಾರೆ. ಈ ಮದ್ಯದ ಸರಕು ಯಾವುದೇ ತೆರಿಗೆ ಪಾವತಿ ಮಾಡದೆ ಹಾಗೂ ಅಧಿಕೃತ ದಾಖಲಾತಿಗಳು ಹೊಂದದೆ ಇದ್ದ ಕಾರಣ ಸದರಿ ಮದ್ಯದ ಸರಕನ್ನು ಮೇಲೆ ಹೇಳಿದ ವಾಹನದಲ್ಲಿ ಉದ್ದೇಶಪೂರ್ವಕವಾಗಿ ಅಕ್ರಮವಾಗಿ ಸಾಗಾಣಿಕೆಮಾಡಿದ್ದು ಹಾಗೂ ಸದರಿ ಅಕ್ರಮ ಸಾಗಾಣಿಕೆಗೆ ಈ ವಾಹನವನ್ನು ದುರುಪಯೋಗ ಮಾಡಿಕೊಂಡಿರುವುದು ಧೃಡಪಟ್ಟಿರುತ್ತದೆ. ಆದುದರಿಂದ ಆಪಾದಿತರು ಕರ್ನಾಟಕ ಅಬಕಾರಿ ಕಾಯ್ದೆ 1965ರ ನಿಬಂಧನೆ 11, 13A, (E), 14 ರ ಪ್ರಕಾರ ಅಪರಾಧವೆಸಗಿದ್ದು, ಸದರಿ ಅಪರಾಧವು ಕರ್ನಾಟಕ ಅಬಕಾರಿ ಕಾಯ್ದೆ ಕಲಂ 32(1) (2), 34 ಹಾಗೂ 43 ಎ ರ ಪ್ರಕಾರ ಶಿಕ್ಷಾರ್ಹ ಅಪರಾಧವಾಗಿರುತ್ತದೆ.

ವಶಪಡಿಸಿಕೊಂಡ ವಾಹನದ ಮಾಲೀಕತ್ವದ ಬಗ್ಗೆ ಮಾಹಿತಿ ನೀಡಲು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಕೊಡಗು ಜಿಲ್ಲೆ ಇವರನ್ನು ದಿ: 5.8.05ರ ಪತ್ರದಲ್ಲಿ ಕೋರಲಾಗಿದ್ದು ಅವರು ದಿ: 8.8.05 ರಂದು ನೀಡಿರುವ 'ಬಿ' ಎಕ್ಸ್ಟ್ರಾಕ್ಟ್ ಪ್ರಕಾರ ಪ್ರಸ್ತುತ ವಾಹನದ ಮಾಲೀಕರು ಶ್ರೀ ಕೆ.ಆರ್. ಲೋಕೇಶ್ ಬಿನ್ ರಾಮಚಂದ್ರ, ರಾಮಪುರ ನಿವಾಸಿ, ಕಣಿವೆ ಗ್ರಾಮ, ಕುಶಾಲನಗರ ಮತ್ತು ಪಿ. ದೀಪಕ್ ಕುಮಾರ್ ಸೆತಿಯ, 31 ಜನರಲ್

ಮುತ್ತಯ್ಯ ಮುದಲೀ ಸ್ಟ್ರೀಟ್, ಸೆಕೆಂಡ್ ಫ್ಲೋರ್, ರೈನ್‌ಬೋ ಕಾಂಪ್ಲೆಕ್ಸ್, ಸಾಹುಕಾರ್ ಪೇಟ್, ಚೆನ್ನೈ-79 ಇವರು ಸದರಿ ವಾಹನದ ಹೆಚ್.ಪಿ.ಎ. ಹೊಂದಿರುತ್ತಾರೆ ಎಂಬ ಅಂಶ ಸ್ಪಷ್ಟವಾಗಿರುತ್ತದೆ.

ಮುಖ್ಯ ರಾಸಾಯನಿಕ ವಿಶ್ಲೇಷಣಾಧಿಕಾರಿ, ಬೆಂಗಳೂರು ಇವರು ದಿ: 11.8.05 ರಂದು ನೀಡಿರುವ ರಾಸಾಯನಿಕ ವಿಶ್ಲೇಷಣಾ ವರದಿಯಲ್ಲಿ ಈ ಪ್ರಕರಣದಲ್ಲಿ ವಶಪಡಿಸಿಕೊಂಡ ದ್ರವದಲ್ಲಿ ಮಿಥೈಲ್ ಆಲ್ಕೋಹಾಲ್ ಅಂಶವಿದೆ ಹಾಗೂ ಸದರಿ ಮದ್ಯವು ಮಾನವ ಸೇವನೆಗೆ ಅರ್ಹವಾಗಿದೆ ಎಂಬುದಾಗಿ ವರದಿ ಮಾಡಿರುತ್ತಾರೆ. ಅವರ ವರದಿ ಮೇರೆಗೆ ಈ ಪ್ರಕರಣದಲ್ಲಿ ಮದ್ಯವನ್ನು ಸಾಗಾಣಿಕೆ ಮಾಡಲಾಗಿದೆ ಎಂಬುದೂ ಹಾಗೂ ಯಾವುದೇ ಅಧಿಕೃತ ದಾಖಲಾತಿಗಳಿಲ್ಲದೆ ಮದ್ಯವನ್ನು ಸಾಗಾಣಿಕೆ ಮಾಡಿದ್ದು, ಸದರಿ ಅಕ್ರಮ ಮದ್ಯ ಸಾಗಾಣಿಕೆಗೆ ಮೇಲೆ ಹೇಳಿದ ವಾಹನವನ್ನು ಬಳಸಿರುವುದು ದಾಖಲೆಗಳಿಂದ ಸಾಬೀತಾಗಿರುತ್ತದೆ.

ವಾಹನದ ಮಾಲೀಕರಾದ ಶ್ರೀ ಕೆ.ಆರ್. ಲೋಕೇಶ್ ಬಿನ್ ರಾಮಚಂದ್ರ ಇವರಿಗೆ ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43(ಬಿ) ರ ಅಡಿಯಲ್ಲಿ ಈ ಪ್ರಾಧಿಕಾರದಿಂದ ನೋಟಿಸನ್ನು ನೀಡಲಾಗಿದ್ದು, ವಾಹನವು ಅಕ್ರಮ ಮದ್ಯ ಸಾಗಾಣಿಕೆಗೆ ದುರ್ಬಳಕೆ ಮಾಡಿಕೊಂಡಿರುವ ಕಾರಣ ಸದರಿ ವಾಹನವನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬ ಬಗ್ಗೆ ವಿವರಣೆ ನೀಡಲು ಅವರಿಗೆ ಸೂಚನೆ ನೀಡಲಾಗಿತ್ತು. ಅವರಿಗೆ ದಿ: 31.8.05 ರಂದು ನೋಟೀಸ್ ಜಾರಿಯಾಗಿದ್ದರೂ ಸಹಾ ಅವರು ಯಾವುದೇ ವಿವರಣೆ ನೀಡಿರುವುದಿಲ್ಲ. ಹಾಗೂ ವಾಹನದ ಬಿಡುಗಡೆಗೆ ಯಾವುದೇ ಅಹವಾಲು ಸಲ್ಲಿಸಿರುವುದಿಲ್ಲ. ಸದರಿ ವಾಹನದ ಹೆಚ್.ಪಿ.ಎ. ಹೊಂದಿದವರಾದ ಪಿ. ದೀಪಕ್ ಕುಮಾರ್ ಸೆತಿಯ, 31 ಜನರಲ್ ಮುತ್ತಯ್ಯ ಮುದಲೀ ಸ್ಟ್ರೀಟ್, ಸೆಕೆಂಡ್ ಫ್ಲೋರ್, ರೈನ್‌ಬೋ ಕಾಂಪ್ಲೆಕ್ಸ್, ಸಾಹುಕಾರ್ ಪೇಟೆ, ಚೆನ್ನೈ-79 ಇವರಿಂದ ಸಹಾ ಯಾವುದೇ ಪ್ರತಿಕ್ರಿಯೆ ಬಂದಿರುವುದಿಲ್ಲ. ಆದ್ದರಿಂದ ಅವರ ವಿವರಣೆ ಏನೂ ಇಲ್ಲವೆಂದು ಭಾವಿಸಲಾಗಿದೆ. ಈ ಎಲ್ಲಾ ಅಂಶಗಳ ಆಧಾರದ ಮೇಲೆ ಈ ವಾಹನವು ಅಕ್ರಮ ಮದ್ಯ ಸಾಗಾಣಿಕೆಗೆ ದುರುಪಯೋಗ ಮಾಡಿಕೊಳ್ಳಲಾಗಿದೆ ಎಂಬ ಅಂಶ ದೃಢಪಟ್ಟಿರುತ್ತದೆ.

ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43 ರಡಿಯಲ್ಲಿ ಪ್ರಕರಣವನ್ನು ದಾಖಲು ಮಾಡುವಲ್ಲಿ ಆರೋಪಿಗಳು ಪತ್ತೆಯಾಗದಿದ್ದಲ್ಲಿ, ಅಥವಾ ಪತ್ತೆಯಾಗುವ ಸಾಧ್ಯತೆಗಳು ಇಲ್ಲದಿದ್ದಲ್ಲಿ ಹಾಗೂ ಜಪ್ತು ಮಾಡಲಾದ ವಾಹನವನ್ನು ಜಪ್ತುಪಡಿಸಿದ ಒಂದು ತಿಂಗಳೊಳಗೆ ಯಾವುದೇ ವ್ಯಕ್ತಿಯು ವಾಹನಕ್ಕೆ ಸಂಬಂಧಿಸಿದ ಕಾನೂನುಬದ್ಧವಾದ ದಾಖಲೆಗಳೊಂದಿಗೆ ಮಾಲೀಕತ್ವವನ್ನು ಕೋರಿ ಪ್ರಾಧಿಕಾರದ ಮುಂದೆ ಬಾರದಿದ್ದಲ್ಲಿ ಮತ್ತು ಸದರಿ ಸ್ವತ್ತುಗಳು ಕರ್ನಾಟಕ ಅಬಕಾರಿ ಕಾಯಿದೆ 1965, ಕಲಂ 43ಸಿ ರಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾದಂತಹ ಸ್ವತ್ತುಗಳಾಗಿದ್ದಲ್ಲಿ ಈ ಪ್ರಾಧಿಕಾರವು ಅಕ್ರಮ ಮದ್ಯ ಸಾಗಾಣಿಕೆಗೆ ಬಳಸಿದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿದೆ. ಆದ ಕಾರಣ ಸದರಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತ ಎಂದು ನಿರ್ಧರಿಸಿ ಈ ಕೆಳಕಂಡ ಆದೇಶ.

**ಆದೇಶ**

ಎನ್.ಎಂ. ಹುಸೇನ್, ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ಕೊಡಗು ಜಿಲ್ಲೆ, ಮಡಿಕೇರಿ, ಆದ ನಾನು ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಲಂ 43(ಎ) ನಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ನಿಯಮ 43(ಬಿ) ರನ್ವಯ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿದ ನಂತರ ಅಬಕಾರಿ ಉಪ ನಿರೀಕ್ಷಕರು, ಮಡಿಕೇರಿ ವಲಯ ಇವರ ಮೊಕದ್ದಮೆ ಸಂ: 1 / 2005-06 ದಿ: 22.7.2005 ರಂದು ಜಪ್ತುಪಡಿಸಿಕೊಂಡ ಮಾರುತಿ ಕಾರ್ ಸಂ. CKW-2167 ರನ್ನು ಮತ್ತು ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಮದ್ಯದಲ್ಲಿ ರಾಸಾಯನಿಕ ವಿಶ್ಲೇಷಣೆಗೆ ತೆಗೆದ ಸ್ಯಾಂಪಲ್‌ಗಳನ್ನು ಹೊರತುಪಡಿಸಿ ಕರ್ನಾಟಕ ಅಬಕಾರಿ ಕಾಯಿದೆ ಕಲಂ 43 ಸಿ ಅನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ವಶಪಡಿಸಿಕೊಂಡ ಮದ್ಯಗಳು ಅಧಿಕೃತ ಡಿಸ್ಟಿಲರಿಗಳಿಂದ ತಯರಾದ ಬಗ್ಗೆ ಯಾವುದೇ ಆಧಾರಗಳು ಲಭ್ಯವಿಲ್ಲದಿದ್ದು, ಇದು ಅನಧಿಕೃತ ತಯಾರಿಕಾ ಮದ್ಯಗಳು ಎಂಬುದಾಗಿ ಸಾಬೀತಾಗಿರುತ್ತದೆ. ಇಂತಹ ಮದ್ಯವನ್ನು ಸಾರ್ವಜನಿಕರ ಉಪಯೋಗಕ್ಕೆ ಯೋಗ್ಯವಿಲ್ಲದ್ದರಿಂದ ಹಾಗೂ ಸಾರ್ವಜನಿಕರ ಆರೋಗ್ಯದ ಹಿತದೃಷ್ಟಿಯಿಂದ ಇದನ್ನು ನಾಶಪಡಿಸುವುದು ಸೂಕ್ತವಾಗಿರುವುದರಿಂದ ಸದರಿ ಮದ್ಯವನ್ನು ಅಬಕಾರಿ ನಿರೀಕ್ಷಕರು, ಮಡಿಕೇರಿ ವಲಯ ಇವರ ಸಮಕ್ಷಮ ಮಹಜರು ಜರುಗಿಸಿ ನಾಶಪಡಿಸಲು ಹಾಗೂ ಖಾಲಿ ಉಳಿದ ಸೀಸೆಗಳನ್ನು ಪ್ರಸಕ್ತ ಮಾರುಕಟ್ಟೆಯಲ್ಲಿ ದಕ್ಕುವ ಬೆಲೆಗೆ ಮಾರಾಟ ಮಾಡಿ ಸಂಗ್ರಹಣೆಯನ್ನು ಸರ್ಕಾರಕ್ಕೆ ಪಾವತಿಸಿ ವರದಿ ಮಾಡಲು ಅಬಕಾರಿ ಉಪ ನಿರೀಕ್ಷಕರು, ಜಾರಿ ಮತ್ತು ತನಿಖೆ, ಸಂ: 1 ಮಡಿಕೇರಿ ತಾಲ್ಲೂಕು ಇವರಿಗೆ ಆದೇಶಿಸಿದೆ.

ಮುಟ್ಟುಗೋಲು ಹಾಕಿಕೊಳ್ಳಲಾಗಿರುವ ವಾಹನಗಳನ್ನು 30 ದಿನಗಳು ಕಳೆದ ನಂತರ ಕರ್ನಾಟಕ ಅಬಕಾರಿ (ಮುಟ್ಟುಗೋಲು ಸ್ವತ್ತುಗಳ ವಿಲೇವಾರಿ) ನಿಯಮಗಳ 1967 ರ ಅನುಸಾರ ಬಹಿರಂಗ ಹರಾಜು ಮೂಲಕ ವಿಲೇಗೊಳಿಸಲು ಆದೇಶಿಸಿದೆ.

ಈ ಆದೇಶ ಇಂದು ಅಂದರೆ 22.11.05 ರಂದು ಬೆರಳಚ್ಚು ಮಾಡಿ ಬೆರಳಚ್ಚು ಮಾಡಿದ ಪ್ರತಿಯನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು. ಈ ಆದೇಶ ಇಂದಿನಿಂದ 30 ದಿವಸಗಳ ನಂತರ ಜಾರಿಗೆ ಬರುವುದು.

ಅಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು,
ಕೊಡಗು ಜಿಲ್ಲೆ, ಮಡಿಕೇರಿ.

ಪಿ.ಆರ್. 1996

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಯವರ ಕಛೇರಿ, ಸಾಗರ ವಿಭಾಗ, ಸಾಗರ**

**ತಿದ್ದುಪಡಿ ಆದೇಶ**

**ಕ್ರ. ಸಂ. ಬಿ3. ಅಮೊ. ವಾಹನ. 06 / 04-05, ದಿನಾಂಕ: 06ನೇ ಡಿಸೆಂಬರ್ 2005.**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ ಈ ಕಛೇರಿಯ 71ಎ ನ್ಯಾಯಾಲಯದಿಂದ ದಿ: 26.10.2005ರಂದು ಹೊರಡಿಸಿದ ಆದೇಶ ನಂ ಬಿ3.ಅಮೊ.ವಾಹನ. 06 / 05-06ರಲ್ಲಿ ಆದೇಶದ ಭಾಗದಲ್ಲಿ ಹಾಲುಮಡ್ಡಿ ತೂಕ 4 ಕೆ.ಜಿ. ಎಂದು ಓದಿಕೊಳ್ಳಲು ಕೋರಿದೆ.

ಪಿ.ಆರ್. 2002

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ.

**ಸಹಕಾರ ಸಂಘಗಳ ಉಪ ನಿಬಂಧಕರ ಕಛೇರಿ, ಬೀದರ್ ಜಿಲ್ಲೆ, ಬೀದರ್**

**ವಿಷಯಃ** ಸ್ಥಗೀತಗೊಂಡ **ದಿ: ಹಾಲು ಉತ್ಪಾದಕರ ಸಹಕಾರ ಸಂಘ ನಿ, ಕೊಹಿನೂರು ತಾಃ ಬಸವಕಲ್ಯಾಣ** ಇದನ್ನು ಸಹಕಾರ ಕಾಯ್ದೆ 1959 ರ ಕಲಂ 72 (2) ರನ್ವಯ ಸಮಾಪನೆ ಗೊಳಿಸುವ ಬಗ್ಗೆ

**ಉಲ್ಲೇಖಃ** 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೀದರ ಉಪ ವಿಭಾಗ, ಬೀದರ ಇವರ ಪತ್ರ ಸಂಖ್ಯೆ/ಸನಿಬಿ1/ವಿ6/ಸಮಾಪನೆ/ಸಿಆರ್-/2005-2006/ದಿನಾಂಕಃ 12-08-2005.

**ಪ್ರಸ್ತಾವನೆಃ**

ಸಹಕಾರ ಸಂಘಗಳ ಸಹಾಯಕ ನಿಬಂಧಕರು.ಬೀದರ ರವರು ನೊಂದಣಿ ಸಂಖ್ಯೆ/ಆರ್‌ಎಸ್‌ಆರ್/ಬಿಡಿಆರ್/ಎಂಪಿಸಿಎಸ್/7313/1979-80, ದಿನಾಂಕ: 23-8-1979 ರಲ್ಲಿ ನೊಂದಣಿ **ದಿ: ಹಾಲು ಉತ್ಪಾದಕರ ಸಹಕಾರ ಸಂಘ ನಿ, ಕೊಹಿನೂರ ತಾಃ ಬಸವಕಲ್ಯಾಣ** ಈ ಸಂಘವು ಸುಮಾರು-----ವರ್ಷಗಳಿಂದ ತನ್ನ ಕಾರ್ಯಚಟುವಟಿಕೆಗಳನ್ನು ನಡೆಸದೆ ಸಂಪೂರ್ಣವಾಗಿ ಸ್ಥಗಿತಗೊಂಡಿರುತ್ತದೆ ಆದರಿಂದ ಇದನ್ನು ಸಮಾಪನೆ ಗೊಳಿಸಲು ಉಲ್ಲೇಖ (1) ರ ಮುಖೇನ ಶಿಫಾರಸ್ಸು ಮಾಡಿರುತ್ತಾರೆ. ಹಾಗೂ ಸದರಿ ಸಂಘದ ಸದಸ್ಯರಿಗೆ ಸಂಘದ ಪುನಃಶ್ಚೇತನಗೊಳಿಸಲು ಆಸಕ್ತಿ ಇರುವುದಿಲ್ಲ ಹಾಗೂ ಸಂಘದ ಸಮಾಪನೆ ಬಗ್ಗೆ ಯಾರಿಂದಲೂ ಯಾವುದೇ ತರಹದ ಆಕ್ಷೇಪಣೆ ಬಂದಿರುವುದಿಲ್ಲವೆಂದು ವರದಿ ಮಾಡಿರುತ್ತಾರೆ. ಪ್ರಯುಕ್ತ ಈ ಸಂಘವನ್ನು ಇದೆ ರೀತಿ ಮುಂದುವರೆಯಲು ಬಿಟ್ಟಲ್ಲಿ ಇನ್ನಷ್ಟು ಸಂಘದ ಸ್ಥಿತಿ ಹದಗೆಡುವ ಸಂಭಂವವಿರುವುದರಿಂದ ಮತ್ತು ಸದಸ್ಯರಿಗೆ ಯಾವುದೆ ರೀತಿಯ ಪ್ರಯೋಜನ ಇಲ್ಲವೆಂದು ಮನಗಂಡು ಸಹಾಯಕ ನಿಬಂಧಕರು, ಬೀದರ ರವರು ಇದನ್ನು ಸಮಾಪನೆಗೊಳಿಸಲು ಶಿಫಾರಸ್ಸು ಮಾಡಿರುವುದರಿಂದ ಮತ್ತು ಇದನ್ನು ಪುನಶ್ಚೇತನಗೊಳಿಸಲು ಸದಸ್ಯರಲ್ಲಿ ಆಸಕ್ತಿ ಕಂಡು ಬಂದಿಲ್ಲವಾದ್ದರಿಂದ ಸದರಿ ಸಂಘವನ್ನು ಸಮಾಪನೆಗೊಳಿಸುವುದು ಸೂಕ್ತವೆಂದು ಮನಗಂಡು ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಉನಿಬಿ/ವಿ2/ಸಮಾಪನೆ/ಸಿಆರ್-/2005-2006/3038, ದಿನಾಂಕ: 14ನೇ / 15ನೇ ನವೆಂಬರ್ 2005**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಗಣಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 72 (2) ರನ್ವಯ ಹಾಗೂ ಸರ್ಕಾರಿ ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ/69/ಸಿಎಲ್‌ಎಂ/200/ದಿನಾಂಕಃ21-11-2001 ರ ಪ್ರಕಾರ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ **ಎಂ.ಡಿ. ಮಠಪತಿ** ಸಹಕಾರ ಸಂಘಗಳ ಉಪ ನಿಬಂಧಕರು, ಬೀದರ ಜಿಲ್ಲೆ ಬೀದರ ಆದ ನಾನು ಸ್ಥಗಿತಗೊಂಡ **ದಿಃ ಹಾಲು ಉತ್ಪಾದಕರ ಸಹಕಾರ ಸಂಘ ನಿ,ಕೊಹಿನೂರ ತಾಃ ಬಸವಕಲ್ಯಾಣ** ಇದನ್ನು ಸಮಾಪನೆಗೊಳಿಸಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 73 (1) ರನ್ವಯ **ಸಹಕಾರ ಸಭಿವೃದ್ಧಿ ಅಧಿಕಾರಿ, ಹುಮನಾಬಾದ** ಇವರಿಗೆ ಸದರಿ ಸಂಘದ ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಿ ಆದೇಶ ಹೊರಡಿಸಿರುತ್ತೇನೆ.

ಸಮಾಪನಾಧಿಕಾರಿಗಳು ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 74 ಹಾಗೂ ನಿಯಮಗಳು 1960 ರ ನಿಯಮ 33 ರ ನಿರ್ದೇಶನಗಳನ್ವಯ ಸದರಿ ಸಂಘದ ಪ್ರಭಾರವನ್ನು ಪಡೆದು ಸಂಘದ ಆಸ್ತಿ - ಜವಾಬ್ದಾರಿ ವಿಲೇಗೊಳಿಸಲು ಆಧ್ಯತಾ ಪಟ್ಟಿ ಸಲ್ಲಿಸುವುದು ಹಾಗೂ ಅನುಮೋದನೆ ಪಡೆದು ಆಸ್ತಿ ಜವಾಬ್ದಾರಿ ವಿಲೇಗೋಳಿಸಿ ನೊಂದಣಿ ಸಂಖ್ಯೆ ರದ್ದತಿಗಾಗಿ ಈ ಆದೇಶದ 30 ದಿವಸಗಳೊಳಗಾಗಿ ಪ್ರಸ್ತಾವನೆ ಸಲ್ಲಿಸಲು ಸೂಚಿಸಿದೆ.

ಈ ಆದೇಶವನ್ನು ನನ್ನ ಸಹಿ ಮತ್ತು ಈ ಕಛೇರಿ ಮುದ್ರೆಯೊಂದಿಗೆ ಇಂದು ದಿನಾಂಕಃ 14-11-2005 ರಂದು ಹೊರಡಿಸಲಾಗಿದೆ.

ಪಿ.ಆರ್. 1787 ಸಹಕಾರ ಸಂಘಗಳ ಉಪ ನಿಬಂಧಕರು, ಬೀದರ್.

**ಸಹಕಾರ ಸಂಘಗಳ ಉಪ ನಿಬಂಧಕರ ಕಛೇರಿ, ದಾವಣಗೆರೆ ಜಿಲ್ಲೆ, ದಾವಣಗೆರೆ**

**ನಂ: ಡಿಆರ್:ಡಿವಿಜಿ:ಎಲ್‌ಕ್ಯೂಡಿ:ಸಿಆರ್-26:2003-04, ದಿನಾಂಕ: 25ನೇ ಅಕ್ಟೋಬರ್ 2005**

**ವಿಷಯಃ** ಸಮಾಪನೆಗೊಂಡ ರಾಜನಹಳ್ಳಿ ವ್ಯವಸಾಯ ಸೇವಾ ಸಹಕಾರ ಸಂಘ ನಿ, ರಾಜನಹಳ್ಳಿ ಹರಿಹರ ತಾಃ ಈ ಸಂಘದ ಸಮಾಪನಾ ಆದೇಶವನ್ನು ರದ್ದುಪಡಿಸಿ ಸಂಘವನ್ನು ಪುನಃಶ್ಚೇತನಗೊಳಿಸಲು ಸಹಕಾರ ಕಾಯ್ದೆ 1959 ರ ಕಲಂ 72 (3) ರಡಿಯಲ್ಲಿ ಆದೇಶಿಸುವ ಕುರಿತು.

**ಉಲ್ಲೇಖಃ** 1) ಈ ಕಛೇರಿ ಆದೇಶ ಸಮಸಂಖ್ಯೆ ದಿನಾಂಕ: 31-08-2004.,
2) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಪತ್ರ ದಿನಾಂಕ: 02-02-2005.
3) ವ್ಯವಸ್ಥಾಪಕರು ವ್ಯ. ಸೇ. ಸ. ಸಂ. ನಿ ರಾಜನಹಳ್ಳಿ ಇವರ ಪತ್ರ ದಿನಾಂಕ: 12-11-2004.

ವಿಷಯ ಸೂಚಿತ ಸಂಘವು ಸ್ಥಗಿತಗೊಂಡಿದ್ದ ಕಾರಣ ಉಲ್ಲೇಖ-1 ರ ಈ ಕಛೇರಿಯ ಆದೇಶದ ಪ್ರಕಾರ ಇದನ್ನು ಸಮಾಪನೆಗೊಳಿಸಲಾಗಿತ್ತು. ಉಲ್ಲೇಖ-3 ರ ಪತ್ರದಲ್ಲಿ ವ್ಯವಸ್ಥಾಪಕರು ವ್ಯವಸಾಯ ಸೇವ ಸಹಕಾರ ಬ್ಯಾಂಕ್ ನಿ, ರಾಜನಹಳ್ಳಿ ಇವರು ದಿನಾಂಕಃ 05-11-2004 ರಂದು ನಡೆಸಿದ ಸಾರ್ವಜನಿಕ ಸಭೆಯಲ್ಲಿ ಗ್ರಾಮಸ್ಥರು, ಈ ಗ್ರಾಮವು ನೀರಾವರಿ ಪ್ರದೇಶವಾಗಿದ್ದು, ರೈತ ರಿಂದ ಕೂಡಿದ್ದು, ವ್ಯವಸಾಯ ಅಭಿವೃದ್ಧಿಗೆ ಈ ಸಂಘದ ಅವಶ್ಯಕತೆಯು ಇರುವುದರಿಂದ ಸದರಿ ಸಂಘವನ್ನು ಪುನಃಶ್ಚೇತನಗೊಳಿಸುವ ಬಗ್ಗೆ ವಿಶೇಷ ಕಾರ್ಯಕ್ರಮ ಹಾಕಿಕೊಂಡು, ಕೆಲವು ಅಭಿವೃದ್ಧಿಗೆ ಶ್ರಮಿಸಿ ಸಂಘವನ್ನು ಮುಂದುವರೆಸಿಕೊಂಡು ಹೋಗಲು ಅವಕಾಶ ಮಾಡಿಕೊಡಲು ಇಲಾಖಾಧಿಕಾರಿಗಳನ್ನು ಕೋರಲು ಸರ್ವಾನುಮತದಿಂದ ನಿರ್ಣಯಿಸಿ ತೀರ್ಮಾನಿಸಿ ಕೈಗೊಂಡಿರುವ ಬಗ್ಗೆ ನಡವಳಿಕೆಗಳನ್ನು ಸಲ್ಲಿಸಿರುತ್ತಾರೆ. ಉಲ್ಲೇಖ-2 ರ ಪತ್ರದಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರು ಸದರಿ ಸಂಘವನ್ನು ಪುನಃಶ್ಚೇತನಗೊಳಿಸಲು 05 ವರ್ಷಗಳ ಕ್ರಿಯಾ ಯೋಜನೆಗೆ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್‌ನ ಅನುಮೋದನೆ ಪಡೆದು ವರದಿ ಸಲ್ಲಿಸಿ ಸಂಘದ ಸಮಾಪನಾದೇಶವನ್ನು ರದ್ದುಗೊಳಿಸಿ ಸಂಘದ ಕಾರ್ಯ ಚಟುವಟಿಕೆಗಳನ್ನು ಪ್ರಾರಂಭಿಸಲು ಸಂಘವನ್ನು ಪುನಃಶ್ಚೇತನಗೊಳಿಸಲು ಶಿಫಾರಸ್ಸು ಮಾಡಿರುತ್ತಾರೆ. ಸಂಘವನ್ನು ಪುನಃಶ್ಚೇತನಗೊಳಿಸಲು ಸಲ್ಲಿಸಿರುವ ಐದು ವರ್ಷಗಳ ಕ್ರಿಯಾ ಯೋಜನೆ ಅನುಸಾರವಾಗಿ ಸಂಘವನ್ನು ಕಾರ್ಯ

ಪ್ರವರ್ತವನ್ನಾಗಿ ಮಾಡುವ ನಿಬಂಧನೆಗೆ ಒಳಪಟ್ಟು ಉಲ್ಲೇಖ–1 ರ ಸಮಾಪನಾ ಆದೇಶವನ್ನು ರದ್ದುಗೊಳಿಸಲು ಸದರಿ ಸಂಘವನ್ನು ಮುಂದುವರೆಸಿಕೊಂಡು ಹೋಗಲು ಅನುಮತಿಯನ್ನು ನೀಡಲು ಉದ್ದೇಶಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 72 (3) ರನ್ವಯ ಕರ್ನಾಟಕ ಸರ್ಕಾರದ ಅಧಿಸೂಚನೆ ಸಂ ಸಿಎಂಡಬ್ಲ್ಯೂ ಃ69ಃ ಸಿಎಲ್ಎಮ್ಃ2001 ದಿಃ21–11–2001 ರಡಿಯಲ್ಲಿ ದತ್ತ ವಾಗಿರುವ ಅಧಿಕಾರವನ್ನು ಚಲಾಯಿಸಿ ದಾವಣಗೆರೆ ಜಿಲ್ಲೆಯ ಸಹಕಾರ ಸಂಘಗಳ ಉಪ ನಿಬಂಧಕರು ಕೆ. ಎಂ. ಆಶಾ ಆದ ನಾನು ರಾಜನಹಳ್ಳಿ ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ, ರಾಜನಹಳ್ಳಿ ಹರಿಹರ ತಾಃ ಇದರ ಉಲ್ಲೇಖ –1 ರ ಸಮಾಪನಾ ಆದೇಶವನ್ನು ರದ್ದುಗೊಳಿಸಿ ಈ ಸಂಘವನ್ನು ಮುಂದುವರೆಸಿಕೊಂಡು ಹೋಗಲು ಅವಕಾಶ ಮಾಡುತ್ತಾ ಈ ಮೂಲಕ ಸಂಘವನ್ನು ಪುನಃಶ್ಚೇತನಗೊಳಿಸಿ ಆದೇಶಿಸಿರುತ್ತೇನೆ.

ಪುನಃಶ್ಚೇತನಗೊಂಡ ನಂತರ ಸಂಘದ ಪ್ರಥಮ ಮಹಾಸಭೆಯನ್ನು ಸಹಕಾರ ಸಂಘಗಳ ಕಾಯ್ದೆ ಮತ್ತು ನಿಯಮಗಳ ಪ್ರಕಾರ ಜರುಗಿಸಲು ಸಂಘದ ಕಾರ್ಯದರ್ಶಿಗೆ ಸೂಚಿಸಿದೆ. ಹಾಗೂ ನೂತನ ಆಡಳಿತ ಮಂಡಳಿಯನ್ನು ಸಹಕಾರ ಸಂಘಗಳ ಕಾಯ್ದೆ ಮತ್ತು ನಿಯಮಗಳ ಪ್ರಕಾರ ರಚಿಸಲು ಸಹಕಾರ ಅಭಿವೃದ್ಧಿ ಅಧಿಕಾರಿ, ಹರಿಹರ ಇವರನ್ನು ಚುನಾವಣಾಧಿಕಾರಿಯಾಗಿ ನೇಮಿಸಿದೆ. ಈ ಕಾರ್ಯವನ್ನು ಜರುಗಿಸಿ ಹಾಗೂ ಮಹಾ ಸಭೆಯಲ್ಲಿ ಹಾಜರಾಗಿ ಈ ಕಛೇರಿಗೆ ವರದಿ ಮಾಡಲು ಸೂಚಿಸಿದೆ. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರು ಸಂಘದ ಪುನಃಶ್ಚೇತನಕ್ಕಾಗಿ ಸೂಚಿರುವ 05 ಚರ್ಷಗಳ ಕ್ರಿಯಾ ಯೋಜನೆಯನುಸಾರ ಕ್ರಮ ಕೈಗೊಳ್ಳುವ ಸಂಬಂಧ ಮೇಲ್ವಿಚಾರಣೆ ಮಾಡಿ ಈ ಕಛೇರಿಗೆ ವರದಿ ಸಲ್ಲಿಸಲು ಸೂಚಿಸಿದೆ.

ಈ ಆದೇಶವನ್ನು ಇಂದು ದಿನಾಂಕಃ 25–10–2005 ರಂದು ನನ್ನ ಸ್ವಹಸ್ತ ಸಹಿ ಮತ್ತು ಕಛೇರಿ ಮೊಹರಿನೊಂದಿಗೆ ಹೊರಡಿಸಲಾಗಿದೆ.

ಸಹಕಾರ ಸಂಘಗಳ ಉಪ ನಿಬಂಧಕರು,
ಪಿ.ಆರ್. 1788 ದಾವಣಗೆರೆ ಜಿಲ್ಲೆ, ದಾವಣಗೆರೆ.

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಸಂಯುಕ್ತ ನಿಬಂಧಕರ ಕಛೇರಿ, ಬೆಂಗಳೂರು ಪ್ರಾಂತ, ಬೆಂಗಳೂರು

**ಸಂಖ್ಯೆ: ಜೆಆರ್‌ಬಿ:ಎಲ್‌ಕ್ಯೂಡಿ:40:ಎಲ್‌ಎಂಸಿ:04–05, ದಿನಾಂಕ: 24ನೇ ಅಕ್ಟೋಬರ್ 2005**

**ವಿಷಯಃ** ಸ್ಥಗಿತಗೊಂಡಿರುವ ಹೊನ್ನಾಳಿ ತಾಲ್ಲೂಕು ಕುರಿ ಮತ್ತು ಉಣ್ಣೆ ಉತ್ಪಾದಕರ ಸಹಕಾರ ಸಂಘ ನಿಯಮಿತ, ಹೊನ್ನಾಳಿ ಇದರ ನೋಂದಣಿ ರದ್ಧತಿ ಬಗ್ಗೆ.

**ಉಲ್ಲೇಖಃ** 1) ಈ ಕಛೇರಿಯ ಆದೇಶ ಸಂಖ್ಯೆ. ಜೆಆರ್‌ಬಿ:ಎಲ್‌ಕ್ಯೂಡಿ:40:ಎಲ್‌ಎಂಸಿ:04–05 ದಿನಾಂಕ:28–2–05.
2) ಸಹಕಾರ ಸಂಘಗಳ ಉಪನಿಬಂಧಕರು, ದಾವಣಗೆರೆ ರವರ ಪ್ರಸ್ತಾವೆ ಸಂ.ಡಿಆರ್:ಡಿವಿಜಿ:ಸಮಾಪನೆ:54:00–01 ದಿನಾಂಕ:28–1–05.

**ಪ್ರಸ್ತಾವನೆಃ–**

ಹೊನ್ನಾಳಿ ತಾಲ್ಲೂಕು ಕುರಿ ಮತ್ತು ಉಣ್ಣೆ ಉತ್ಪಾದಕರ ಸಹಕಾರ ಸಂಘ ನಿಯಮಿತ, ಹೊನ್ನಾಳಿ, ದಾವಣಗೆರೆ ಜಿಲ್ಲೆ ಸಹಕಾರ ಸಂಘವು ನೋದಣಿ ಸಂಖ್ಯೆ.ಡಿಆರ್‌ಎಸ್:20455:95–96 ದಿನಾಂಕ: 23–1–96 ರಲ್ಲಿ ನೋದಾವಣಿಯಾಗಿರುತ್ತದೆ, ಈ ಸಂಘದ ಕಾರ್ಯವ್ಯಾಪ್ತಿಯು ಹೊನ್ನಾಳಿ ತಾಲ್ಲೂಕಿಗೆ ಸೀಮಿತವಾಗಿರುತ್ತದೆ.

ಈ ಸಹಕಾರ ಸಂಘವನ್ನು ಸಮಾಪನೆಗೊಳಿಸಿ ನೋಂದಣಿ ರದ್ದುಪಡಿಸಬೇಕೆಂದು ಸಹಕಾರ ಸಂಘಗಳ ಉಪನಿಬಂಧಕರು, ದಾವಣಗೆರೆಯವರು ಉಲ್ಲೇಖ(2) ರಲ್ಲಿ ಪ್ರಸ್ತಾವನೆಯನ್ನು ಸಲ್ಲಿಸಿದ್ದು ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ, ಸಂಘವು ನೋಂದಣಿ ಯಾದಾಗಿನಿಂದ ಉಪನಿಯಮಗಳಿಗನುಗುಣವಾಗಿ ಯಾವುದೇ ಕಾರ್ಯಚಟುವಟಿಕೆಗಳನ್ನು ನಡೆಸದೇ ಸ್ಥಗಿತಗೊಂಡಿರುವುದಾಗಿ ವರದಿಯಾಗಿದ್ದು, ಸಂಘದ ಲೆಕ್ಕಪತ್ರಗಳು ಸಹ ಲೆಕ್ಕಪರಿಶೋಧನೆಯಾಗಿರುವುದಿಲ್ಲ. ಈ ಸಂಘದ ಅಸ್ತಿತ್ವದ ಬಗ್ಗೆ ಪ್ರತಿಕಾ ಪ್ರಕಟಣೆ ಹೊರಡಿಸಲಾಗಿದ್ದರೂ ಸಂಘದ ಆಡಳಿತ ಮಂಡಳಿಯ ಸದಸ್ಯರಾಗಲೀ ಅಥವಾ ಸಾಮಾನ್ಯ ಸದಸ್ಯರಾಲೀ ಪ್ರತಿಕ್ರಿಯಿಸದಿರುವುದು ಸಂಘದ ಬಗ್ಗೆ ಇವರಿಗೆ ಯಾವುದೇ ಆಸಕ್ತಿ ಇಲ್ಲವೆಂಬುದನ್ನು ಸ್ಪಷ್ಟಪಡಿಸುತ್ತದೆ. ಇಂತಹ ಸಂದರ್ಭಗಳಲ್ಲಿ ಸಂಘಕ್ಕೆ ಸಮಾಪನಾಧಿಕಾರಿಯನ್ನು ನೇಮಿಸದೇ ಸಂಘವನ್ನು ಸಮಾಪನೆಗೊಳಿಸಿ, ಆದೇಶ ದಿನಾಂಕದಿಂದ 2 (ಎರಡು) ತಿಂಗಳ ಅವಧಿಯ ನಂತರ ಸಂಘದ ನೊಂದಣಿ ಸಂಖ್ಯೆಯನ್ನು ರದ್ದುಪಡಿಸಲು ಕಲಂ 75 ರಲ್ಲಿ ಅವಕಾಶವಿರುವುದರಿಂದ, ಸದರಿ ಸಂಘವನ್ನು ಉಲ್ಲೇಖ (1) ರಂತೆ ಸಮಾಪನಾಧಿಕಾರಿಯನ್ನು ನೇಮಿಸದೇ ದಿನಾಂಕ:28–2–05 ರಂದು ಸಮಾಪನೆಗೊಳಿಸಲಾಗಿದ್ದು ಆದೇಶ ದಿನಾಂಕದಿಂದ ಎರಡು ತಿಂಗಳ ಅವಧಿಯು ಮುಗಿದಿದ್ದು, ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959 ಕಲಂ 75 ರನ್ವಯ ಸಂಘದ ನೋಂದಣಿ ಸಂಖ್ಯೆಯನ್ನು ರದ್ದುಪಡಿಸಬಹುದಾಗಿದ್ದು ಕೆಳಕಂಡಂತೆ ಆದೇಶಿಸಿದೆ.

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ.ಸಿಎಂಡಬ್ಲ್ಯೂ :69:ಸಿಎಲ್‌ಎಂ:2001 ದಿನಾಂಕ:21–11–2001 ರಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ, **ಕೆ.ಹೆಚ್. ತಿಮ್ಮಯ್ಯ ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು** ಆದ ನಾನು ಸಮಾಪನೆಯಲ್ಲಿರುವ **ಹೊನ್ನಾಳಿ ತಾಲ್ಲೂಕು ಕುರಿ ಮತ್ತು ಉಣ್ಣೆ ಉತ್ಪಾದಕರ ಸಹಕಾರ ಸಂಘ ನಿಯಮಿತ, ಹೊನ್ನಾಳಿ, ದಾವಣಗೆರೆ ಜಿಲ್ಲೆ** ಈ ಸಹಕಾರ ಸಂಘದ ನೋಂದಣಿ ಸಂಖ್ಯೆ.ಡಿಆರ್‌ಎಸ್: 20455:95–96 ದಿನಾಂಕ:23–1–96 ನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿ ಆದೇಶಿಸಿರುತ್ತೇನೆ.

ಆದೇಶದ ದಿನಾಂಕದಿಂದ ಸಂಘವು ಸಂಪೂರ್ಣವಾಗಿ ತನ್ನ ಅಸ್ತಿತ್ವವನ್ನು ಕಳೆದುಕೊಂಡಿದೆಯೆಂದೂ ಇದರ ಕಾರ್ಯಚಟುವಟಿಕೆಗಳು ವಿಸರ್ಜಿತವಾಗಿದೆಯೆಂದು ಪರಿಗಣಿಸತಕ್ಕದ್ದು

ಈ ಆದೇಶವನ್ನು ಈ ದಿನ ದಿನಾಂಕ: 24–10–2005 ರಂದು ಕಛೇರಿ ಮೊಹರು ಹಾಗೂ ಸ್ವಸಹಿಯೊಂದಿಗೆ ಹೊರಡಿಸಲಾಗಿದೆ.

ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು,
ಬೆಂಗಳೂರು ಪ್ರಾಂತ, ಬೆಂಗಳೂರು.

ಪಿ.ಆರ್. 1789

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

### ಅಧಿಸೂಚನೆ

**ಸಂಖ್ಯೆ: ಆಕುಕ 414 ಪಿಐಎಂ 2005, ಬೆಂಗಳೂರು, ದಿನಾಂಕ: 9ನೇ ನವೆಂಬರ್ 2005**

ಕರ್ನಾಟಕ ರಾಜ್ಯ ಪತ್ರ ವಿಶೇಷ ಪತ್ರಿಕೆ ದಿನಾಂಕ: 27.5.2005 **ರಲ್ಲಿ ಪ್ರಕಟಗೊಂಡ** ಸರ್ಕಾರದ ಅಧಿಸೂಚನೆ ಸಂಖ್ಯೆ : ಆಕುಕ 3 ಪಿಐಎಂ 2004, ದಿನಾಂಕ 20.5.2004 ರಲ್ಲಿ ಪ್ರಕಟಿಸಲಾದ ಭಾರತೀಯ ವೈದ್ಯ ಪದ್ಧತಿಗಳು ಮತ್ತು ಹೋಮಿಯೋಪತಿ ಇಲಾಖೆಯ ವೈದ್ಯರುಗಳ ಅಂತಿಮ ಬಡ್ತಿ ಪರಿಷ್ಕರಣೆಯ ಜೇಷ್ಠತಾ ಪಟ್ಟಿಯಲ್ಲಿ ಡಾ: ವಿ. ಸೀತಾರಾಮ ರೆಡ್ಡಿ, ವೈದ್ಯರು, ದರ್ಜೆ–2 (ನಿವೃತ್ತ) ಇವರ ಅರ್ಹತಾ ದಿನಾಂಕಗಳನ್ನು ಕರ್ನಾಟಕ ರಾಜ್ಯ ಸಿವಿಲ್ ಸೇವಾ (ಮುಂಬಡ್ತಿ ವೇತನ ಮತ್ತು ಪಿಂಚಣಿ ಕ್ರಮ ಬದ್ಧತೆ) ಅಧಿನಿಯಮ 1973ರ ಸೆಕ್ಷನ್ 4ರನ್ವಯ ಈ ಕೆಳಕಂಡಂತೆ ನಿಗಧಿಪಡಿಸಲಾಗಿದೆ.

| ಜೇಷ್ಠತಾ ಪಟ್ಟಿಯಲ್ಲಿನ ಕ್ರಮ ಸಂಖ್ಯೆ | ವೃಂದ | ಪೂರ್ವಾನ್ವಯ ಮುಂಬಡ್ತಿಗೆ ಅರ್ಹತಾ ದಿನಾಂಕ |
|---|---|---|
| 152 | ವೈದ್ಯರು ದರ್ಜೆ–2 | 01.03.1993 |
| | ವೈದ್ಯರು, ದರ್ಜೆ–1 | 01.03.1996 |
| | ಉಪನಿರ್ದೇಶಕರು | 31.05.2000 |

ಮೇಲ್ಕಂಡ ವೈದ್ಯರು ವಯೋ ನಿವೃತ್ತಿ ಹೊಂದಿರುವುದರಿಂದ ಕರ್ನಾಟಕ ನಾಗರೀಕ ಸೇವಾ (ಆರ್ ಪಿ ಪಿ ಪಿ) ಕಾಯ್ದೆ 1973ರ ಸೆಕ್ಷನ್ 6 ಮತ್ತು 7ರ ಅಡಿಯಲ್ಲಿ ನಿವೃತ್ತಿ ವೇತನ ಮತ್ತು ಉಪದಾನಗಳನ್ನು ಪರಿಷ್ಕರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಪ್ರಭಾಕರ್ ಎಂ. ಶೇಟ್**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ),
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

ಪಿ.ಆರ್. 1790

## ಕಂದಾಯ ಇಲಾಖೆ

### ಅಧಿಸೂಚನೆ

**ಸಂಖ್ಯೆ: ಕಂಇ 172 ಮುಸೇವಿ 2005, ಬೆಂಗಳೂರು, ದಿನಾಂಕ: 9ನೇ ನವೆಂಬರ್ 2005**

ಧಾರ್ಮಿಕ ದತ್ತಿ ಇಲಾಖೆಯಲ್ಲಿ ಗ್ರೂಪ್ 'ಬಿ' ಅಧಿಕಾರಿಯಾಗಿ ಕರ್ತವ್ಯ ನಿರ್ವಹಿಸುತ್ತಿರುವ ಶ್ರೀ ಎಸ್. ಜಯಕುಮಾರ್ ದತ್ತಿ ಸಹಾಯಕರು, ಜಿಲ್ಲಾಧಿಕಾರಿಗಳ ಕಛೇರಿ, ಉಡುಪಿ ರವರ ವಿರುದ್ಧ ಇವರ ಮೇಲೆ ಲೆಕ್ಕ ಪರಿಶೋಧನಾ ವರದಿಯಲ್ಲಿ ಕ್ರಮ ಕೈಗೊಳ್ಳಲು ಆಡಿಟ್ ಪ್ಯಾರಾ ಬಾಕಿ ಇದ್ದಲ್ಲಿ ಇವರಿಗೆ ತಾತ್ಕಾಲಿಕ ಪಿಂಚಣಿ ಬಿಡುಗಡೆ ಮಾಡುವ ಷರತ್ತಿಗೊಳಪಟ್ಟು, ಸದರಿಯವರು ದಿನಾಂಕ:30/11/2005ರಂದು ಸರ್ಕಾರಿ ಸೇವೆಯಿಂದ ವಯೋ ನಿವೃತ್ತಿ ಹೊಂದಲು ಸರ್ಕಾರವು ಅನುಮತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಕೆ. ಜಯಚಂದ್ರ**
ಪೀಠಾಧಿಕಾರಿ, ಕಂದಾಯ ಇಲಾಖೆ (ಮುಜರಾಯಿ).

ಪಿ.ಆರ್. 1791

## KARNATAKA ADMINISTRATIVE TRIBUNAL

**BDA Complex, Indiranagar, Bangalore - 560038.**

**No.KAT/EST(1)/KRI-Act.2000/27/2001, Dated : 10th October, 2005.**

**NOTIFICATION UNDER SECTION 5 OF THE RIGHT TO INFORMATION (CENTRAL) ACT,2005 (No.22 OF 2005)**

It is hereby notification to the general public that for furnishing information under the (Central Act No. 22 of 2005) Right to Information Act, 2005 (hereinafter referred to as "the said Act") the Deputy Registrar (Admn.) Karnataka Administrative Tribunal, Bangalore is designated as the State Assistant Public Information Officer (Admn.) and the Deputy Registar (Judicial), Karnataka Administrative Tribunal, Bangalore is designated as the State Assistant Public Information Officer (Judicial) in respect of Karnataka Adminitrative Tribunal, BDA Complex, Indiranagar, Bangalore - 38, to whom applications under Section 5(1) of the said Act shall be applied for and they shall dispose of the applications in accordance with law either by issuing information or refusing to give information.

In the event of refusal to give the information sought by a public such of the applicant is entitled to make an appeal to the Registrar, Karnataka Administrative Tribunal, Bangalore under Section 19 of the

said Act within the prescribed period. Therefore, the Registrar, Karnataka Administrative Tribunal, is designated as the Appellate Authority as provided under Section 19 of the said Act.

BY ORDER OF HON'BLE THE CHAIRMAN

P.R. 1796

REGISTRAR, I/C

Karnataka Administrative Tribunal, Bangalore.

**ಆಯುಕ್ತರು, ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ ಬೆಂಗಳೂರು, ಇವರ ನಡೆವಳಿಗಳು**

**ವಿಷಯಃ** ಶ್ರೀ ಬಿ. ಎಸ್. ಪ್ರಭುದೇವ್ ಎದಭೂ ಇವರ ಅನಧಿಕೃತ ಗೈರು ಹಾಜರಿ ಮತ್ತು ದಿನಚರಿಗೆ ಹೆಚ್ಚಿದ ಕಡತಗಳನ್ನು ಕಛೇರಿಗೆ ಹಿಂದಿರುಗಿಸ'ದೇ ಇರುವ ಬಗ್ಗೆ.

**ಉಲ್ಲೇಖಃ** 1) ಭೂಜಂನಿ ಬೆಂಗಳೂರು ಇವರ ಕಾರಣ ಕೇಳಿ ನೋಟಿಸು ಸಂಖ್ಯೆ : ಸಿಬ್ಬಂದಿ. ಶಿಸ್ತು. 66 :2001–02, ದಿನಾಂಕ 7–11–2003 ( ದೋಷಾರೋಪಣೆ ಪಟ್ಟಿಯೊಂದಿಗೆ)

2) ಭೂಜಂನಿ ಬೆಂಗಳೂರು ರವರ ನಡವಳಿ ಸಂಖ್ಯೆ: ಸಿಬ್ಬಂದಿ. ಶಿಸ್ತು. 66 :2001–02, ದಿನಾಂಕ 10–1–05. (ವಿಚಾರಣಾಧಿಕಾರಿಗಳನ್ನು ನೇಮಕ ಮಾಡಿರುವುದು).

3) ಭೂಜಂನಿ ದಾವಣಗೆರೆ ಇವರ ಪತ್ರದ ಸಂಖ್ಯೆ : ಸಿಬ್ಬಂದಿ. ಶಿಸ್ತು. 133:2003–04 ದಿನಾಂಕ 19–3–2005. (ವಿಚಾರಣಾ ವರದಿಯೊಂದಿಗೆ)

4) ಭೂಜಂನಿ ಬೆಂಗಳೂರು ಇವರ ಎರಡನೇ ಕಾರಣ ಕೇಳಿ ನೋಟಿಸು ಸಂಖ್ಯೆ: ಸಿಬ್ಬಂದಿ ಶಿಸ್ತು.66:2001–02, ದಿನಾಂಕ 11–4–2005.

5) ಈ ಕಛೇರಿ ಸಮಸಂಖ್ಯೆ ಎರಡನೇ ಕಾರಣ ಕೇಳಿ ನೋಟೀಸು ದಿನಾಂಕ 14–7–2005 (ವಿಚಾರಣಾ ವರದಿಯೊಂದಿಗೆ)

6) ಶ್ರೀ ಬಿ.ಎಸ್. ಪ್ರಭುದೇವ್ ಎದಭೂ ಇವರ ಲಿಖಿತ ಹೇಳಿಕೆ ದಿನಾಂಕ : ಇಲ್ಲಾ.

**ಪ್ರಸ್ತಾವನೆ:**

ಶ್ರೀ ಬಿ.ಎಸ್. ಪ್ರಭುದೇವ್ ಎರಡನೇ ದರ್ಜೆ ಭೂಮಾಪಕರು ಹಾಲಿ ತಹಶೀಲ್ದಾರ್ ಜಗಳೂರು ತಾಲ್ಲೂಕು ಕಛೇರಿಯಲ್ಲಿ ಕೆಲಸ ನಿರ್ವಹಿಸುತ್ತಿರುವ ಇವರು ಹಿಂದೆ ಕೆಲಸ ನಿರ್ವಹಿಸುತ್ತಿದ್ದ ಭೂದಾಖಲೆಗಳ ಸಹಾಯಕ ನಿರ್ದೇಶಕರು, ಹಂಪನಹಳ್ಳಿ ಕಛೇರಿಯಲ್ಲಿ ದಿನಾಂಕ 5–7–2001 ರಿಂದ 15–7–2001 ರವರೆಗೆ ವೈದ್ಯಕೀಯ ರಜೆ ಸಲ್ಲಿಸಿ, ದಿನಾಂಕ 31–7–2001 ರವರೆಗೆ ಗೈರು ಹಾಜರಾಗಿ ನಂತರ ದಿನಾಂಕ 1–9–2001 ರಿಂದ ಅನಧಿಕೃತ ಗೈರು ಹಾಜರಾದ ಕಾರಣ, ಭೂದಾಖಲೆಗಳ ಜಂಟಿ ನಿರ್ದೇಶಕರು, ಬೆಂಗಳೂರು ಇವರು ಕೆ.ಸಿ.ಎಸ್ (ಸಿಸಿಎ) 1957ರ ನಿಯಮ 11ರನ್ವಯ ನೋಟೀಸನ್ನು (ಅರೋಪಪಟ್ಟಿಯೊಂದಿಗೆ) ದಿನಾಂಕ 7–11–2003 ರಂದು ಹೊರಡಿಸಿರುತ್ತಾರೆ.

ಶ್ರೀ ಬಿ.ಎನ್. ಪ್ರಭುದೇವ್, ದ್ವಿತೀಯ ದರ್ಜೆ ಭೂಮಾಪಕರವರ (ಇನ್ನು ಮುಂದೆ ಈ ನಡೆವಳಿಯಲ್ಲಿ ಆರೋಪಿತ ನೌಕರರೆಂದು ಕರೆಯಲಾಗಿದೆ) ಮೇಲಿನ ಆರೋಪಗಳನ್ನು ಈ ಕೆಳಗಿನಂತೆ ಪುನರುಚ್ಚರಿಸಿದೆ.

**ಆರೋಉಪ–1:**

ಶ್ರೀ ಬಿ.ಎನ್. ಪ್ರಭುದೇವ್, ದ್ವಿತೀಯ ದರ್ಜೆ ಭೂಮಾಪಕರು, ಭೂದಾಖಲೆಗಳ ಸಹಾಯಕ ನಿರ್ದೇಶಕರು, ದರಡನಹಳ್ಳಿ ಕಛೇರಿ ಇಲ್ಲಿ ಸೇವೆ ಸಲ್ಲಿಸುತ್ತಿರುವ ನೀವು ದಿನಾಂಕ 5–7–2001 ರಿಂದ 15–7–2001 ರವರೆಗೆ ವೈದ್ಯಕೀಯ ರಜೆ ಅರ್ಜಿ ಸಲ್ಲಿಸಿ ದಿನಾಂಕ 31–7–2001 ರವರೆಗೆ ಅನದಿಕೃತ ಗೈರು ಹಾಜರಾಗಿರುತ್ತೀರಿ. ದಿನಾಂಕ 1–8–2001 ರಂದು ಕಛೇರಿ ಕೆಲಸಕ್ಕೆ ಹಾಜರಾಗಿ ದಿನಾಂಕ 31–8–2001 ರವರೆಗೆ ಕೆಲಸ ನಿರ್ವಹಿಸಿ ದಿನಾಂಕ 1–9–2001 ರಿಂದ ಈ ವರೆಗೆ ಕಛೇರಿಗೆ ಸಜೆ ಅರ್ಜಿ ಸಲ್ಲಿಸದೆ ಮಾಹಿತಿ ನೀಡಿದೆ ಮೇಲಧಿಕಾರಿಗಳಿಂದ ರಜೆ ಮಂಜೂರು ಮಾಡಿಸಿಕೊಳ್ಳದೆ ಅನಧಿಕೃತ ಗೈರು ಹಾಜರಾಗಿರುತ್ತೀರಿ. ಈ ಬಗ್ಗೆ ನಿಮಗೆ ಹಲವಾರು ಬಾರಿ ಜ್ಞಾಪನಗಳನ್ನು ನೀಡಿದ್ದು, ಅವುಗಳನ್ನು ಪಡೆದಿದ್ದರೂ ಸಹ ಅವುಗಳಿಗೆ ಉತ್ತರಿಸದೆ ಮೇಲಾಧಿಕಾರಿಗಳ ನಿರ್ದೇಶನದ ಬಗ್ಗೆ ಉದಾಸೀನತೆ, ಅಗೌರವ ಕರ್ತವ್ಯದಲ್ಲಿ ನಿರ್ಲಕ್ಷತೆ ತೋರಿಸಿರುತ್ತೀರಿ. ಇದರಿಂದಾಗಿ ನೀವು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ 106 ಎ ಮತ್ತು 107 ಅನ್ನು ಉಲ್ಲಂಘಿಸಿರುತ್ತೀರಿ ಹಾಗೂ ಕರ್ನಾಟಕ ಸರ್ಕಾರಿ ಸೇವಾ (ನಡತೆ) ನಿಯಮಗಳು 1966 ರ ನಿಯಮ 3(1)(2) ಮತ್ತು (3) ಅನ್ನು ಉಲ್ಲಂಘಿಸಿ ಒಬ್ಬ ಸರ್ಕಾರಿ ನೌಕರನಿಗೆ ತರವಲ್ಲದ ರೀತಿಯಲ್ಲಿ ವರ್ತಿಸಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1967 ರಂತೆ ಶಿಸ್ತು ಕ್ರಮ ಜರುಗಿಸಲು ಅನುವು ಮಾಡಿ ಕೊಟ್ಟಿರುತ್ತೀರಿ. ಅದುದರಿಂದ ಈ ಆರೋಪ ..

**ಆರೋಪ–2:**

ಶ್ರೀ ಬಿ.ಎನ್. ಪ್ರಭುದೇವ್, ದ್ವಿತೀಯ ದರ್ಜೆ ಭೂಮಾಪಕರು, ಭೂದಾಖಲೆಗಳ ಸಹಾಯಕ ನಿರ್ದೇಶಕರು, ದರಡನಹಳ್ಳಿ ಕಛೇರಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದ ನೀವು ಈ ದೋಷಾರೋಪಣೆಯೊಂದಿಗೆ ಲಗತ್ತಿಸಿರುವ ನಮೂನೆ 2 ರ ಕಾಲಂ 5 ರಲ್ಲಿ ನಮೂದಿಸಿರುವಂತೆ ಕ್ರಮಸಂಖ್ಯೆ 1 ರಿಂದ 3 ರವರೆಗಿನ ಕಡತಗಳನ್ನು ಅಡವಿ ಕೆಲಸಕ್ಕಾಗಿ ಪಡೆಯುತ್ತೀರಿ. ಹೀಗೆ ಪಡೆದ ಕಡತಗಳನ್ನು ಕಾಲಂ 6 ರಲ್ಲಿ ನಮೂದಿಸಿರುವ ದಿನಾಂಕಗಳಂದು ಅಡವಿ ಕೆಲಸ ನಿರ್ವಹಿಸಿರುವುದಾಗಿ ದಿನಚರಿ ಹಚ್ಚಿದ್ದು, ಈ ಕಡತಗಳನ್ನು ದಿನಚರಿಯಂತೆ ತಯಾರಿಸಿ ಕಛೇರಿಗೆ ಹಿಂದಿರುಗಿಸದೆ ನಿರ್ದೇಶಕರ ಸುತ್ತೋಲೆಯಂತೆ ದಿನಚರಿ ಹಚ್ಚಿದ ಮುಂದಿನ ತಿಂಗಳ 15ನೇ ದಿನಾಂಕದೊಳಗೆ ಕಛೇರಿಗೆ ಹಿಂದಿರುಗಿಸಬೇಕೆಂದು ನಿರ್ದೇಶನವಿದ್ದು, ಈ ನಿಬಂದನೆಯಂತೆ ನೀವು ಕಡತಗಳನ್ನು ಹಿಂದಿರುಗಿಸದ ಕಾರಣ ಮೇಲಾಧಿಕಾರಿಗಳು ಕಡತಗಳನ್ನು ಹಿಂದಿರುಗಿಸುವಂತೆ ಜ್ಞಾಪನಗಳನ್ನು ನಿಮಗೆ ನೀಡಲಾಗಿದೆ. ಕಡತಗಳನ್ನು ಹಿಂದಿರುಗಿಸುವಂತೆ ಜ್ಞಾಪನಗಳನ್ನು ನೀಡಿದ್ದರೂ ಅವುಗಳನ್ನು ಉದಾಸೀನ ಮಾಡಿ ಅವುಗಳಿಗೆ ಸಮಜಾಯಿಷಿ ನೀಡಿದೆ ಅವುಗಳನ್ನು ದಿಕ್ಕರಿಸಿ ಅಶಿಸ್ತನ್ನು ಪ್ರದರ್ಶಿಸಿರುತ್ತೀರಿ. ನಿಗಧಿತ ಅವಧಿಯೊಳಗೆ ಕಡತಗಳನ್ನು ಸಲ್ಲಿಸದೆ ಸುಮಾರು ವರ್ಷಗಳ ವಿಳಂಭ ಮಾಡಿ ಸಾರ್ವಜನಿಕರ ಕೆಲಸ ಕಾರ್ಯಗಳಿಗೆ ತೊಂದರೆಯನ್ನುಂಟು ಮಾಡಿರುತ್ತೀರಿ. ದಿನಚರಿಯಂತೆ ಕೆಲಸ ನಿರ್ವಹಿಸದೆ ಕಡಿಮೆ ಕೆಲಸವನ್ನು ನಿರ್ವಹಿಸಿ ಸರ್ಕಾರದ

ಖಜಾನೆಯಿಂದ ವೇತನವನ್ನು ಪಡೆದು ಸರ್ಕಾರಿ ಬೊಕ್ಕಸಕ್ಕೆ ನಷ್ಟ ಉಂಟು ಮಾಡಿರುತ್ತೀರಿ. ಆದ್ದರಿಂದ, ನೀವು ಕಡಿಮೆ ಕೆಲಸ ನಿರ್ವಹಿಸಿದ ಅವಧಿಗೆ ನಿಮ್ಮ ಹಾಗೂ ನಿಮ್ಮ ಅದೀನದಲ್ಲಿ ಕೆಲಸ ನಿರ್ವಹಿಸಿದ ಬಾಂದು ಜವಾನರು ಪಡೆದಿರುವ ವೇತನವನ್ನು ನಿಮ್ಮ ವೇತನದಿಂದ ಕಟಾಯಿಸಲು ಅನುವು ಮಾಡಿಕೊಟ್ಟಿರುತ್ತಿರಿ.. ಇದರಿಂದ ನೀವು ಕರ್ತವ್ಯ ಲೋಪವೆಸಗಿ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮ 3(1)(2)(3) ಅನ್ನುಉಲ್ಲಂಘಿಸಿ ಒಬ್ಬ ಸರ್ಕಾರಿ ನೌಕರರಿಗೆ ತರವಲ್ಲದ ರೀತಿಯಲ್ಲಿ ವರ್ತಿಸಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957 ರಂತೆ ಶಿಸ್ತು ಕ್ರಮ ಜರುಗಿಸಲು ಅನುವು ಮಾಡಿಕೊಟ್ಟಿರುವುದರಿಂದ ಈ ಆರೋಪ.

ನೋಟೀಸನ್ನು ಆರೋಪಿತ ನೌಕರರು ದಿನಾಂಕ 27–11–2003 ರಂದು ಸ್ವೀಕರಿಸಿದ್ದು, ಈ ಬಗ್ಗೆ ಯಾವುದೇ ಹೇಳಿಕೆಯನ್ನು ಸಲ್ಲಿಸದೆ ಇರುವುದರಿಂದ ಉಲ್ಲೇಖ (2) ರ ಪ್ರಕಾರ ದೋಷಾರೋಪಣೆಯಲ್ಲಿರುವ ಆರೋಪದ ಸತ್ಯಾಸತೆಯನ್ನು ಕಂಡುಕೊಳ್ಳುವ ಸಲುವಾಗಿ, ಭೂದಾಖಲೆಗಳ ಉಪ ನಿರ್ದೇಶಕರು, ದಾವಣಗೆರೆ ಇವರನ್ನು ವಿಚಾರಣಾಧಿಕಾರಿಗಳನ್ನಾಗಿ ನೇಮಕ ಮಾಡಲಾಗಿದ್ದು ವಿಚಾರಣಾಧಿಕಾರಿಗಳು ವಿಚಾರಣೆ ನಡೆಸಿ, ವಿಚಾರಣಾ ವರದಿಯೊಂದಿಗೆ ವಿಚಾರಣಾ ದಾಖಲಾತಿಗಳನ್ನು ಭೂದಾಖಲೆಗಳ ಜಂಟಿ ನಿರ್ದೇಶಕರು, ಬೆಂಗಳೂರು ರವರಿಗೆ ಉಲ್ಲೇಖ (3) ರ ದಿನಾಂಕ 19–3–2005 ರಂದು ಕಳೂಹಿಸಿರುತ್ತಾರೆ.

ವಿಚಾರಣಾ ವರದಿಯಲ್ಲಿ 1 ರಿಂದ 2 ರವರೆಗಿನ ಆರೋಪಗಳು ಸಾಬೀತಾಗಿರುವುದರಿಂದ, ಭೂದಾಖಲೆಗಳ ಜಂಟಿ ನಿರ್ದೇಶಕರು, ಬೆಂಗಳೂರು ಇವರು ದಿನಾಂಕ 11–4–2005 ರಂದು ಎರಡನೇ ಕಾರಣ ಕೇಳಿ ನೋಟೀಸಿನೊಂದಿಗೆ ವಿಚಾರಣಾ ವರದಿಯನ್ನು ಜಾರಿ ಮಾಡಿದ್ದು, ಆರೋಪಿತ ನೌಕರರು ದಿನಾಂಕ 21–4–2005 ಸ್ವೀಕರಿಸಿ ಯಾವುದೇ ಲಿಖಿತ ಹೇಳಿಕೆಯನ್ನು ಸಲ್ಲಿಸಿರುವುದಿಲ್ಲ.

ದಿನಾಂಕ 1–5–2005 ರಿಂದ ಈ ಇಲಾಖೆಯು ಕಂದಾಯ ಇಲಾಖೆಯೊಂದಿಗೆ ವಿಲೀನವಾಗಿದ್ದು ಹಾಗೂ ವಿಭಾಗಮಟ್ಟದ ಕಚೇರಿಗಳು ಅಂದರೆ ಭೂದಾಖಲೆಗಳ ಜಂಟಿ ನಿರ್ದೇಶಕರ ಕಛೇರಿಗಳು ರದ್ದಾದ ಕಾರಣ, ಈ ಕಛೇರಿಯ ಸುತ್ತೋಲೆ ಸಂಖ್ಯೆ: ಸಿಬ್ಬಂದಿ(ಜ) ಇತರೆ. 8:2001–02, ದಿನಾಂಕ 2–6–05 ರಲ್ಲಿ ಭೂದಾಖಲೆಗಳ ಜಂಟಿ ನಿರ್ದೇಶಕರು ಕಛೇರಿಯಲ್ಲಿರುವ ಶಿಸ್ತು ಪ್ರಕರಣಗಳನ್ನು ಕೇಂದ್ರಕಛೇರಿಗೆ ಹಸ್ತಾಂತರಿಸಲು ಸೂಚಿಸಿರುವ ಮೇರೆಗೆ ಸದರಿ ಕಡತವು ಈ ಕಛೇರಿಯಲ್ಲಿ ಸ್ವೀಕೃತವಾಗಿರುತ್ತದೆ.

ಆರೋಪಿತ ನೌಕರರು ದಿನಾಂಕ 1–9–2001 ರಿಂದ ಭೂದಾಖಲೆಗಳ ಜಂಟಿ ನಿರ್ದೇಶಕರು, ಬೆಂಳೂರು ರವರು ಆರೋಪ ಪಟ್ಟಿ ಹೊರಡಿಸಿರುವ ದಿನಾಂಕದವರೆಗೆ ಅಂದರೆ ದಿನಾಂಕ 7–11–2003 ರವರೆಗೆ ಅನಧಿಕೃತ ಗೈರು ಹಾಜರಾದ ಬಗ್ಗೆ ವಿಚಾರಣೆ ನಡೆಸಿ ಅವರ ವಿರುದ್ಧ ಮಾಡಲಾದ ದೋಷಾರೋಪಣೆ ಮತ್ತು ವಿಚಾರಣೆ ಸಮಯದಲ್ಲಿ ಪರಿಶೀಲಿಸಿರುವ ದಾಖಲಾತಿಗಳು ಗಂಭೀರ ಸ್ವಭಾವವೆಂದು ಪರಿಗಣಿಸಿ, ಆರೋಪಿತ ನೌಕರರು ಅವರ ಮೇಲೆ ಮಾಡಲಾದ ಆರೋಪಗಳನ್ನು ಒಪ್ಪಿಕೊಂಡಿರುವುದರಿಂದ ವಿಚಾರಣಾಧಿಕಾರಿಗಳು ಆರೋಪಿತ ನೌಕರರ ಮೇಲೆ ಮೊದಲಾಗಿರುವ ಎಲ್ಲಾ ಆರೋಪಗಳು ಸಂಪೂರ್ಣವಾಗಿ ರುಜುವಾತಾಗಿರುತ್ತದೆಂಬ ಅಬಿಪ್ರಾಯವನ್ನು ಒಪ್ಪಿ ಆರೋಪಿತ ನೌಕರರಿಗೆ ಮತ್ತೋಂದು ಅವಕಾಶ ನೀಡುವ ಸಲುವಾಗಿ ಈ ಕಛೇರಿಯಿಂದ ಉಲ್ಲೇಖ (5) ರ ದಿನಾಂಕ: 14–7–2005 ರ ಪ್ರಕಾರ ಎರಡನೇ ಕಾರಣ ಕೇಳಿ ನೋಟೀಸನ್ನು ವಿಚಾರಣಾ ವರದಿಯೊಂದಿಗೆ ಜಾರಿಗಾಗಿ ಕಳುಹಿಸಲಾಗಿರುತ್ತದೆ. ನೋಟೀಸನ್ನು ದಿನಾಂಕ 2–8–2005 ರಂದು ಸ್ವೀಕರಿಸಿ ಉಲ್ಲೇಖ (6) ರ ಪ್ರಕಾರ ಲಿಖಿತ ಹೇಳಿಕೆಯನ್ನು ಆರೋಪಿತ ನೌಕರರು ಸಲ್ಲಿಸಿರುತ್ತಾರೆ.

ಭೂದಾಖಲೆಗಳ ಉಪ ನಿರ್ದೇಶಕರು, ದಾವಣಗೆರೆ ಇವರು ದಿನಾಂಕ 19–3–2005 ರಂದು ಸಲ್ಲಿಸಿರುವ ವಿಚಾರಣಾ ವರದಿ ಮತ್ತು ವಿಚಾರಣಾ ದಾಖಲಾತಿಗಳನ್ನು ಹಾಗೂ ದಿನಾಂಕ 14–7–2005 ರಂದು ಈ ಕಛೇರಿಯ ಎರಡನೇ ಕಾರಣ ಕೇಳಿ ನೋಟೀಸಿಗೆ ಆರೋಪಿತ ನೌಕರರು ಸಲ್ಲಿಸಿರುವ ರಕ್ಷಣಾ ಹೇಳಿಕೆಯಲ್ಲಿನ ಅಂಶಗಳನ್ನು ಪರಿಶೀಲಿಸಿರುತ್ತೇನೆ.

ವಿಚಾರಣಾ ವರದಿ ಹಾಗೂ ದಾಖಲಾತಿಗಳ ಪರಿಶಿಲನೆಯಿಂದ ಆರೋಪಿತ ನೌಕರರು, ಈ ಕೆಳಕಂಡಂತೆ ಅನಧಿಕೃತ ಗೈರು ಹಾಜರಾಗಿರುತ್ತಾರೆ.

| | | | |
|---|---|---|---|
| (1) | 16–7–2001 ರಿಂದ 31–7–2001 | 16 ದಿವಸಗಳು | ಆರೋಪ ಪಟ್ಟಿ ಹೊರಡಿಸಿದ ದಿನಾಂಕದವರೆಗೆ ವಿಚಾರಣಾ ವರದಿಯಲ್ಲಿ ತಿಳಿಸಿರುವಂತೆ ದಾಖಲಾತಿಗಳನ್ನು ಪರಿಶೀಲಿಸಲಾಗಿ ವಿಚಾರಣೆ ಪ್ರಕ್ರಿಯೆಯಲ್ಲಿದ್ದಾಗ ಗೈರು ಹಾಜರಾಗಿರುವುದು. |
| (2) | 1––9–2001 ರಿಂದ 7–11–2003 | 798 ದಿವಸಗಳು | |
| (3) | 8–11–2003 ರಿಂದ 9–5–2004 | 183 ದಿವಸಗಳು | |
| (4) | 6–10–2004 ರಿಂದ 9–12–2004 | 65 ದಿವಸಗಳು | |

ಒಟ್ಟು 1062 ದಿವಸ ಅನಧಿಕೃತ ಗೈರು ಹಾಜರಾಗಿರುವುದು ದಾಖಲಾತಿಗಳಿಂದ ರುಜುವಾತಾಗಿರುತ್ತದೆ. ಈ ಪ್ರಕರಣದಲ್ಲಿಯೂ ಸಹ ದಿನಚರಿಗೆ ಹೆಚ್ಚಿದ 13 ಕಡತಗಳು ಕಛೇರಿಗೆ ಹಿಂದಿರುಗಿಸದೇ, ಎಫ್.ಎಂ.ಬಿ ವಹಿಗಳು ಹಾಗೂ ಅಳತೆ ಕೆಲಸಕ್ಕೆ ಹಾಗೂ ದುರಸ್ತಿ ಕೆಲಸಕ್ಕೆ ನೀಡಿರುವ ಕಡತಗಳು ಬಸ್ಸಿನಲ್ಲಿ ಪ್ರಯಾಣಿಸುವಾಗ ಕಳೆದು ಹೋಗಿದೆ ಎಂದು ವಿಚಾರಣಾ ಸಮಯದಲ್ಲಿ ಒಪ್ಪಿಕೊಂಡು ಲಿಖಿತ ಹೇಳಿಕೆಯಲ್ಲಿಯೂ ಸಹ ಒಪ್ಪಿಕೊಂಡಿರುತ್ತಾರೆ.

"ಕರ್ನಾಟ'ಕ ಸರ್ಕಾರಿ ಸೇವ ನಿಯಮಾವಳಿ ನಿಯಮ 108 ರಂತೆ ಸರ್ಕಾರವು ಸಂದರ್ಭದ ವಿಶೇಷ ಸನ್ನಿವೇಶಗಳನ್ನು ಗಮನಿಸಿ ಸನ್ಯಥಾ ನಿರ್ಧರಿಸದ ಹೊರತು ರಜೆ ಪಡೆಯದೇ ನಾಲ್ಕು ತಿಂಗಳು ಅಥವಾ ಅದಕ್ಕೂ ಹೆಚ್ಚು ಅವಧಿಯವರೆಗೆ ಕರ್ತವ್ಯದಿಂದ ಗೈರು ಹಾಜರಾಗಿರುವ ಅಧಿಕಾರಿಯು ಕರ್ನಾಟಕ ಸರ್ಕಾರಿ ಸೇನಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957 ರಲ್ಲಿ ವಿಧಿಸಲಾದ ಕಾರ್ಯವಿಧಾನವನ್ನು ಅನುಸರಿಸಿದ ತರುವಾಯ ತನ್ನನ್ನು ವಜಾ ಮಾಡುವುದಕ್ಕೆ ಅಥವಾ ತೆಗೆದು ಹಾಕುವುದಕ್ಕೆ ಗುರಿಯಾಗಬಹುದು."

ಈ ಪ್ರಕರಣದಲ್ಲಿ ಆರೋಪಿತ ನೌಕರರು ದಿನಾಂಕ 16–7–2001 ರಿಂದ 31–7–2001, ದಿನಾಂಕ 1–9–2001 ರಿಂದ 9–5–2004 ಮತ್ತು 6–10–2004 ರಿಂದ 9–12–2004 ರವರೆಗೆ ಅನಧಿಕೃತ ಗೈರು ಹಾಜರಾದ ಕಾರಣ, ಸಾರ್ವಜನಿಕ ಕೆಲಸ ಕಾರ್ಯಕ್ಕೆ ಅನಾನುಕೂಲ ಉಂಟಾಗಿರುತ್ತದೆ. ಆರೋಪಿತ ನೌಕರರು ಅವರಿಗೆ ಒದಗಿಸಿದ ಅವಕಾಶಗಳನ್ನು ಉಪಯೋಗಿಸಿಕೊಳ್ಳದೆ ಅನಧಿಕೃತ ಗೈರು ಹಾಜರಿ ಬಗ್ಗೆ ಶಿಸ್ತಿನ ಪ್ರಕರಣವು ವಿಚಾರಣೆ ಪ್ರಾರಂಭವಾದ ನಂತರವೂ ಕೂಡ ಆರೋಪಿತ ನೌಕರರು ಕರ್ತವ್ಯಕ್ಕೆ ಹಾಜರಾಗದೆ ಅನಧಿಕೃತ ಗೈರು ಹಾಜರಾಗುವ ಪವೃತ್ತಿಯನ್ನು ಮುಂದುವರೆಸಿರುತ್ತಾರೆ. ಅನಧಿಕೃತ ಗೈರು ಹಾಜರಿ ಬಗ್ಗೆ ಸರ್ಕಾರದ ಸುತ್ತೋಲೆ ಸಂಖ್ಯೆ: ಸಿಆಸುಇ 18 ಸೇಇವಿ 2001, ದಿನಾಂಕ 14–9–2001 ರ ಪ್ರಕಾರ 4 ತಿಂಗಳಿಗಿಂತಲೂ ಹೆಚ್ಚಿನ ಅವಧಿಗೆ ಗೈರು ಹಾಜರಾದಲ್ಲಿ ಕಠಿಣ ದಂಡನೆಗೆ ಒಳಗಾಗಿ

ಸೇವೆಯಿಂದ ವಜಾ ಮಾಡುವ ಅವಕಾಶವಿರುವುದರಿಂದ, ಆರೋಪಿತ ನೌಕರರು ದೀರ್ಘಾವಧಿ ಗೈರು ಹಾಜರಾಗಿರುವುದರಿಂದ, ಅವರಿಗೆ ಸರ್ಕಾರಿ ಆಸಕ್ತಿ ಇಲ್ಲದಿರುವುದು ಕಂಡು ಬಂದಿರುವ ಕಾರಣ, ಆರೋಪಿತ ನೌಕರರ ಮೇಲೆ ಮಾಡಿರುವ (ಅನಧಿಕೃತ ಗೈರಿ ಹಾಜರಿ) ಆರೋಪವು ಸಾಬೀತು ಆಗಿದೆಯೆಂದು ಅಭಿಪ್ರಾಯಪಟ್ಟು, ಕಠಿಣ ದಂಡನೆಯನ್ನು ವಿಧಿಸುವುದು ಸೂಕ್ತವೆಂದು ಈ ಕೆಳಕಂಡಂತೆ ಆದೇಶಿಸಿರುತ್ತೇನೆ.

**ಆದೇಶ ಸಂಖ್ಯೆ : ಸಿಬ್ಬಂದಿ. ಶಿಸ್ತು. 33 :2001–02, ದಿನಾಂಕ 16ನೇ ನವೆಂಬರ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಜೆ.ವಿ. ರಾಮಚಂದ್ರ , ಭಾ.ಆ.ಸೇ., ಆಯುಕ್ತರು, ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ, ಬೆಂಗಳೂರು ಆದ ನಾನು ಶ್ರೀ ಬಿ.ಎಸ್. ಪ್ರಭುದೇವ್, ದ್ವಿತೀಯ ದರ್ಜೆ ಭೂಮಾಪಕರು, ತಹಶೀಲ್ದಾರ್, ಜಗಳೂರು ಕಛೇರಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಇವರನ್ನು ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957 ರ ನಿಯಮ 9(3) ರಲ್ಲಿ ಓದಿಕೊಂಡ ನಿಯಮ 8 (VIII) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಆರೋಪಿತ ನೌಕರರನ್ನು ಸೇವೆಯಿಂದ ವಜಾಗೊಳಿಸುವ ದಂಡನೆಯನ್ನು ವಿಧಿಸಿ. ಆದೇಶಿಸಿದ್ದೇನೆ.

ಆಯುಕ್ತರು,

ಪಿ.ಆರ್. 1800 ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳು, ಬೆಂಗಳೂರು.

## ಸಹಕಾರ ಸಂಘಗಳ ಉಪ ನಿಬಂಧಕರ ಕಛೇರಿ, ತುಮಕೂರು ಜಿಲ್ಲೆ ತುಮಕೂರು

**ನಂ. ಡಿಆರ್‌ಟಿ:ಡಿಎಲ್‌ಎಸ್:40:05–06, ದಿನಾಂಕ: 14ನೇ ನವೆಂಬರ್ 2005**

**ವಿಷಯಃ** ಸ್ಥಗಿತಗೊಂಡಿರುವ ಎಣ್ಣೆ ಬೀಜ ಬೆಳೆಗಾರರ ಸಹಕಾರ ಸಂಘ ನಿಯಮಿತ, ಶೀಬಿ ಅಗ್ರಹಾರ ಶಿರಾ ತಾಲ್ಲೂಕು ಈ ಸಂಘವನ್ನು ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖಃ** 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಉಪವಿಭಾಗ, ಮಧುಗಿರಿ ಇವರ ಪತ್ರ ಸಂಖ್ಯೆ: ಸನಿ–33 :ಎಂಕೆಟಿ :ಸ್ಥಗಿತ ಸ.ಸಂ :04–05 ದಿನಾಂಕ: 5–11–04 ಮತ್ತು 3–9–05

2). ಈ ಕಛೇರಿ ಸಮಸಂಖ್ಯೆ ಪತ್ರ ದಿನಾಂಕ: 9–8–05

**ಪ್ರಸ್ತಾವನೆ:**

ಸ್ಥಗಿತಗೊಂಡಿರುವ ಎಣ್ಣೆ ಬೀಜ ಬೆಳೆಗಾರರ ಸಹಕಾರ ಸಂಘ ನಿ, ಶಿ ಬಿ ಅಗ್ರಹಾರ, ಶಿರಾ ತಾಲ್ಲೋಕು ಈ ಸಂಘವನ್ನೀ ಸಮಾಪನೆಗೊಳಿಸುವಂತೆ ಕೋರಿ ಉಲ್ಲೇಖಿತ (1) ರ ಪತ್ರಗಳಲ್ಲಿ ಸಹಕಾರ ಸಂಂಗಳ ಸಹಾಯಕ ನಿಬಂಧಕರು, ಮಧುಗಿರಿ ಉಪವಿಭಾಗ, ಮಧುಗಿರಿ ಇವರು ಪ್ರಸ್ತಾವನೆ ಸಲ್ಲಿಸಿ ಸಂಘವನ್ನು ಸಮಾಪನೆಗೊಳಿಸುವಂತೆ ಕೋರಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ ಸಂಘವು 2001ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ದಿನಾಂಕ: 30–9–2002 ರಂದು ನಡೆಸಿರುತ್ತದೆ. ನಂತರ ಸಂಂವು ಸ್ಥಗಿತಗೊಂಡಿರುತ್ತದೆ.

ಸಂಘವು ಆಡಳಿತ ಮಂಡಳಿಗೆ 1999–2000 ರಿಂದ 2003–04 ನೇ ಸಾಲಿಗೆ ದಿನಾಂಕ 29–5–1999 ರಂದು ಚುನಾವಣೆ ನಡೆದಿದ್ದು ಆಡಳಿತ ಮಂಡಳಿಯ ಅವಧಿಯು ದಿನಾಂಕ: 31–3–04 ಕ್ಕೆ ಪೂರ್ಣಗೊಂಡಿರುತ್ತದೆ ಎಂದು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಇವರು ವರದಿ ಮಾಡಿರುತ್ತಾರೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸಂಘವು ಕಳೆದ 3 ವರ್ಷಗಳಿಂದ ಸ್ಥಗಿತಗೊಂಡಿದ್ದು ಸಂಘದ ಸದಸ್ಯರಿಗಾಗಲೀ, ಸಾರ್ವಜನಿಕರಿಗಾಗಲೀ ಯಾವುದೇ ಉಪಯೋಗಗಳು ದೊರೆಯದೆ ಸ್ಥಗಿತಗೊಂಡಿರುತ್ತದೆ. ಹಾಗೂ ಸಂಘದ ಆಡಳಿತ ಮಂಡಳಿಯ ಅವಧಿಯು ಪೂರ್ಣಗೊಂಡಿದ್ದು ನೂತನ ಆಡಳಿತ ಮಂಡಳಿ ರಚನೆಯಾಗದೇ ಇರುತ್ತದೆ. ಈ ಎಲ್ಲಾ ಅಂಶಗಳನ್ನು ಪರಿಗಣಿಸಿ ಸಂಘವನ್ನು ಸಮಾಪನೆಗೊಳಿಸಲು ಈ ಕೆಳಕಂಡ ಆದೇಶ ಹೊರಡಿಸಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಯಲ್ಲಿ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959 ರ ಕಲಂ 72(2)(ಬಿ) ಅನ್ವಯ ಹಾಗೂ ಸರ್ಕಾರದ ಆದೇಶ ಸಂಖ್ಯೆ: ಸಿಎಂಡಬ್ಲ್ಯೂ 69:ಸಿಎಲ್‌ಎಂ: 2001 ದಿನಾಂಕ 21–11–2001 ರಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಕೆ.ಎಲ್.ನರಸಿಂಹಮೂರ್ತಿ, ಕೆ.ಸಿ.ಎಸ್, ಸಹಕಾರ ಸಂಘಗಳ ಉಪ ನಿಬಂಧಕರು, ತುಮಕೂರು ಜಿಲ್ಲೆ ತುಮಕೂರು ಆದ ನಾನು ಸ್ಥಗಿತಗೊಂಡಿರುವ ಎಣ್ಣೆ ಬೀಜ ಬೆಳೆಗಾರರ ಸಹಕಾರ ಸಂಘ ನಿಯಮಿತ ಶೀಬಿ ಅಗ್ರಹಾರ ಶರಾ ತಾಲ್ಲೂಕು ಈ ಸಂಘವನ್ನು ಸಮಾಪನೆಗೊಳಿಸಿ ಸಹಕಾರ ಅಭಿವೃದ್ಧಿ ಅಧಿಕಾರಿ ಶಿರಾ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಿಸಿರುತ್ತೇನೆ. ಸಮಾಪನಾಧಿಕಾರಿಯು ಕೂಡಲೇ ಸಂಘದ ಪ್ರಭಾವ ಪಡೆದು ಸಂಘದ ಆಸ್ತಿ ಜವಾಬ್ದಾರಿ ಅನ್ವಯ ಆದ್ಯತಾ ಪಟ್ಟಿ ತಯಾರಿಸಿ ಈ ಕಛೇರಿಯಿಂದ ಅದ್ಯತಾ ಪಟ್ಟಿಗೆ ಅನುಮೋದನೆ ಪಡೆದುಕೊಂಡು ಆಸ್ತಿ ಜವಾಬ್ದಾರಿಗಳನ್ನು ಕಾಯಿದೆ ಮತ್ತು ನಿಯಮಾನುಸಾರ ಶೀಘ್ರವಾಗಿ ವಿಲೇವಾರಿ ಮಾಡಿ ಸಂಘದ ನೋಂದಣಿ ರದ್ದತಿಗೆ ಪ್ರಸ್ತಾವನೆ ಸಲ್ಲಿಸಲು ಆದೇಶಿಸಿದೆ.

ಈ ಆದೇಶವು ಕೂಡಲೇ ಜಾರಿಗೆ ಬರುತ್ತದೆ. ಈ ಆದೇಶವನ್ನು ನನ್ನ ಸ್ವಸಹಿ ಮತ್ತು ಕಛೇರಿ ಮೊಹರಿನೊಂದಿಗೆ ದಿನಾಂಕ: 14–11–2005 ರಂದು ಹೊರಡಿಸಿದೆ.

ಪಿ.ಆರ್. 1801 ಸಹಕಾರ ಸಂಘಗಳ ಉಪ ನಿಬಂಧಕರು, ತುಮಕೂರು ಜಿಲ್ಲೆ

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾತಿ ಅಧಿಕಾರಿಗಳು, ತುಮಕೂರು ಉಪವಿಭಾಗ, ತುಮಕೂರು ಇವರ ನಡವಳಿಕೆಗಳು.

**ವಿಷಯ:** ಶ್ರೀ ಚಿಕ್ಕೇಗೌಡ ಬಿನ್ ಹನುಮಂತಯ್ಯ ಉರುಫ್ ಪಾಪಣ್ಣ ಮತ್ತು ಶ್ರೀ ಕೆಂಪೇಗೌಡ ಬಿನ್ ಹನುಮಂತಯ್ಯ ಮೇಣಸಂದ್ರ ಇವರ ಸ್ಥಿರ ಆಸ್ತಿಗಳನ್ನು ತುಮಕೂರು ತಾಲ್ಲೂಕು ಪ್ರಾಥಮಿಕ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿಯಮಿತ, ತುಮಕೂರು ಇವರ ಹೆಸರಿಗೆ ವರ್ಗಾವಣೆಗೊಂಡಿರುವ ಆಸಿಯನ್ನು ಪುನರ್ ವರ್ಗಾಯಿಸುವ ಬಗ್ಗೆ

**ಉಲ್ಲೇಖ:** 1) ಈ ಕಛೇರಿ ಆದೇಶ ಸಂಖ್ಯೆ ಎ. ಆರ್.ಟಿ/ಎ.ಬಿ.ಎನ್.ಸಿ.ಆರ್/888/2001–02 ದಿನಾಂಕ 13.02–2002.

2) ವ್ಯವಸ್ಥಾಪಕರು ಅಭಿವೃದ್ಧಿ ಬ್ಯಾಂಕ್ ಲಿ., ತುಮಕೂರು ಇವರ ಪತ್ರ ದಿನಾಂಕ 24–09–2005.

ಪ್ರಸ್ತಾವನೆ:

ಶ್ರೀ ಚಿಕ್ಕೇಗೌಡ ಬಿನ್ ಹನುಮಂತಯ್ಯ ಉರುಫ್ ಪಾಪಣ್ಣ ಮತ್ತು ಶ್ರೀ ಕೆಂಪೇಗೌಡ ಬಿನ್ ಹನುಮಂತಯ್ಯ ಮೇಣಸಂದ್ರ, ತುಮಕೂರು ತಾಲ್ಲೂಕು ಇವರು ತಾಲ್ಲೂಕು ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ. ತುಮಕೂರು. ಈ ಬ್ಯಾಂಕಿನಲ್ಲಿ ಹೈನುಗಾರಿಕೆ, ದ್ರಾಕ್ಷಿ ಮುಳುಗಡೆ ಯಂತ್ರ ಸಾಲ ಪಡೆದು ಸುಸ್ತಿದಾರರಾಗಿದ್ದರಿಂದ ಇವರಿಂದ ಬರಬೇಕಾದ ಅಸಲು ಬಡ್ಡಿ ಇತರೆ ಖರ್ಚು ಒಟ್ಟು ರೂ. 3,44,012–11 ಗಳ ವಸೂಲಾತಿಗಾಗಿ ಡಿಕ್ರಿ ಆದೇಶ ಪಡೆದು ಅಮಲ್ಜಾರಿ ಸಂಖ್ಯೆ 52, 60,61, 62,63. 64, 65, 66 / 92–93 ರೀತ್ಯಾ ಅಮಲ್ಜಾರಿ ಪಡೆಯಲಾಗಿದ್ದರ ಮೇರೆಗೆ ದಿನಾಂಕ 21–11–2000 ರಂದು ಬಹಿರಂಗವಾಗಿ ಇವರು ಆಧಾರ ಮಾಡಿಕೊಟ್ಟಿರುವ ಸ್ಥಿರಾಸ್ತಿಗಳನ್ನು ಹರಾಜು ನಡೆಸಿ, ಹರಾಜಿನಲ್ಲಿ ಯಾರು ಬಿಡ್ಡುದಾರರು ಬಾರದೇ ಇದ್ದುದರಿಂದ ಮಾರಾಟಾಧಿಕಾರಿಗಳ ನಡವಳಿಕೆ ಮೇರೆಗೆ ಉಲ್ಲೇಖ (1) ರ ಆದೇಶದಲ್ಲಿ ಇವರ ಸ್ಥಿರಾಸ್ತಿಗಳನ್ನು ತಾಲ್ಲೂಕು ಪ್ರಾಥಮಿಕ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ, ತುಮಕೂರು ಇವರ ಹೆಸರಿಗೆ ವರ್ಗಾಯಿಸಿ ಆದೇಶ ನೀಡಲಾಗಿತ್ತು. ತರುವಾಯ ದಿನಾಂಕ 26–09–2005 ರಸೀದಿ ನಂ. 4658, ದಿನಾಂಕ 15–06–2005, ರಸೀದಿ ನಂ. 2874 ದಿನಾಂಕ 16–06–2005 ರಂದು 2840 ರೀತ್ಯಾ ಶ್ರೀ ಚಿಕ್ಕೇಗೌಡ ಬಿನ್ ಹನುಮಂತಯ್ಯ ಉರುಫ್ ಪಾಪಣ್ಣ ಮತ್ತು ಕೆಂಪೇಗೌಡ ಬಿನ್ ಹನುಮಂತಯ್ಯ ಮೇಣಸಂದ್ರ ಇವರು ಪೂರಾ ಹಣವನ್ನು ಸಾಲ ನೀಡಿದ ಬ್ಯಾಂಕಿಗೆ (ತಾಲ್ಲೂಕು ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ., ತುಮಕೂರು) ಪಾವತಿಸಿರುತ್ತಾರೆ. ಹಾಗೂ ಬ್ಯಾಂಕಿನ ವ್ಯವಸ್ಥಾಪಕರು ದಿನಾಂಕ 26–09–2005 ರಂದು ಸಾಲ ತೀರುವಳಿ ದೃಢೀಕರಣ ಪತ್ರವನ್ನು ನೀಡಿರುತ್ತಾರೆ. ಸದರಿಯವರ ಸ್ಥಿರಾಸ್ತಿಯು ರೈತರ ಸೇವಾ ಸಹಕಾರ ಬ್ಯಾಂಕ್ ನಿ., ನಾಗವಲ್ಲಿ ತುಮಕೂರು ತಾಲ್ಲೂಕು ಹಾಗೂ ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ., ಅರೆಯೂರು, ತುಮಕೂರು ತಾಲ್ಲೂಕು ಈ ಸಂಘಗಳಿಗೆ ಆಧಾರವಾಗಿದ್ದು, ಸಾಲಗಾರರು ಸದರಿ ಸಂಘಗಳಿಂದ ಸಾಲ ತೀರುವಳಿ ದೃಢೀಕರಣ ಪತ್ರವನ್ನು ಪಡೆದು ಸಲ್ಲಿಸಿರುತ್ತಾರೆ ಮತ್ತು ಸದರಿ ಸ್ಥಿರಾಸ್ತಿಗಳ ಬಾಬ್ತು ಕಂದಾಯವನ್ನು ಸಾಲಗಾರರು ಸರ್ಕಾರಕ್ಕೆ ಪಾವತಿ ಮಾಡಿರುತ್ತಾರೆ ಇದರಿಂದಾಗಿ ತಾಲ್ಲೂಕು ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ., ತುಮಕೂರು ಇವರ ಸಾಲ ಪೂರಾ ತೀರುವಳಿಯಾಗಿದ್ದು, ಶ್ರೀ ಚಿಕ್ಕೇಗೌಡ ಬಿನ್ ಹನುಮಂತಯ್ಯ ಉರುಫ್ ಪಾಪಣ್ಣ ಮತ್ತು ಶ್ರೀ ಕೆಂಪೇಗೌಡ ಬಿನ್ ಹನುಮಂತಯ್ಯ ಮೇಣಸಂದ್ರ ಇವರ ಸ್ಥಿರಾಸ್ತಿ ಕರಡಿಗೆರೆ ಕಾವಲ್ 5/210,5/212, 5/211 ಮತ್ತು ಕರಡಿಗೆರೆ ಗ್ರಾಮದ ಸರ್ವೆ ನಂ. 31/1, 31/2 ಮತ್ತು ಮೇಣಸಂದ್ರ ಗ್ರಾಮದ ಸರ್ವೆ ನಂ. 10.2, 74/5, 73/6 ಕ್ರಮವಾಗಿ ಎಕರೆ ಗುಂಟೆ 4–00, 1–00, 2–00, 0–28, 0–12. 1–03, 0–26 0–20 ಈ ಸ್ಥರಾಸ್ತಿಗಳನ್ನು ಬ್ಯಾಂಕಿನ ಹೆಸರಿನಿಂದ ಪುನಃ ಶ್ರೀ ಚಿಕ್ಕೇಗೌಡ ಬಿನ್ ಹನುಮಂತಯ್ಯ ಉರುಫ್ ಪಾಪಣ್ಣ ಮತ್ತು ಶ್ರೀ ಕೆಂಪೇಗೌಡ ಬಿನ್ ಹುನುಮಂತಯ್ಯ ಮೇಣಸಂದ್ರ ಇವರ ಹೆಸರಿಗೆ ವರ್ಗಾಯಿಸುವಂತೆ ಕೋರಿ ಉಲ್ಲೇಖ (2) ರಲ್ಲಿ ಬ್ಯಾಂಕಿನ ವ್ಯವಸ್ಥಾಪಕರು, ದಿನಾಂಕ 14–09–2005 ರ ಬ್ಯಾಂಕಿನ ತೀರ್ಮಾನದೊಂದಿಗೆ ಮನವಿ ಸಲ್ಲಿಸಿರುತ್ತಾರೆ. ಈ ಸಂಬಂಧ ಸಾಲ ತೀರುವಳಿ ಪತ್ರ ನೀಡಿರುತ್ತಾರೆ. ಸದರಿಯವರ ಮನವಿಯನ್ನು ಒಪ್ಪಿ ಉಲ್ಲೇಖ (1)ರಲ್ಲಿ ದಿನಾಂಕ 13–02–2002 ರಂದು ಹೊರಪಡಿಸಿದ ಆದೇಶವನ್ನು ರದ್ದುಪಡಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ ಕ್ರ.ಸಂ. ಎ.ಆರ್.ಟಿ ಎಬಿ.ಎಸ್.ಸಿ.ಆರ್/888/01–02, ದಿನಾಂಕ 15ನೇ ನವೆಂಬರ್ 2005**

ಶ್ರೀ ಬಿ. ಜಯಣ್ಣ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಹಾಗೂ ವಸೂಲಿ ಅಧಿಕಾರಿಗಳು. ತುಮಕೂರು ಉಪವಿಭಾಗ, ತುಮಕೂರು ಆದ ನಾನು ಕರ್ನಾಟಕ ರಾಜ್ಯ ಸಹಕಾರ ಸಂಘಗಳ ಕಾಯಿದೆ 1959 ರ ನಿಯಮ 38 (ಎ) 12 ರನ್ವಯ ಹಾಗೂ ಕರ್ನಾಟಕ ರಾಜ್ಯ ಸರ್ಕಾರದ ಅಧಿಸೂಚನೆ ಸಂಖ್ಯೆ ಸಿ.ಎಂ.ಡಬ್ಲ್ಯೂ/69/ಸಿ.ಸಿ.ಎಂ./2001 ದಿನಾಂಕ 21–11–2001 ರ ರೀತ್ಯಾ ಪ್ರಯೋಜಿಸಲ್ಪಟ್ಟ ಅಧಿಕಾರವನ್ನು ಚಲಾಯಿಸಿ ಶ್ರೀ ಚಿಕ್ಕೇಗೌಡ ಬಿನ್ ಹನುಮಂತಯ್ಯ ಉರುಫ್ ಪಾಪಣ್ಣ ಮತ್ತು ಶ್ರೀ ಕೆಂಪೇಗೌಡ ಬಿನ್ ಹನುಮಂತಯ್ಯ ಮೇಣಸಂದ್ರ ಗ್ರಾಮ, ಕರಡಿಗೆರೆ ಗ್ರಾಮ, ಕರಡಿಗೆರೆ ಕಾವಲ್ ಗ್ರಾಮಗಳ ಸ್ಥಿರಾಸ್ತಿಗಳನ್ನು ತಾಲ್ಲೂಕು ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ., ತುಮಕೂರು ಈ ಬ್ಯಾಂಕಿನ ಹೆಸರಿಗೆ ವರ್ಗಾಯಿಸಲು ನೀಡಿದ ಆದೇಶವನ್ನು ಹಿಂತೆಗೆದುಕೊಂಡು, ಸದರಿ ಸ್ಥಿರಾಸ್ತಿಗಳನ್ನು ಶ್ರೀ ಚಿಕ್ಕೇಗೌಡ ಬಿನ್ ಹನುಮಂತಯ್ಯ ಉರುಫ್ ಪಾಪಣ್ಣ ಮತ್ತು ಶ್ರೀ ಕೆಂಪೇಗೌಡ ಬಿನ್ ಹನುಮಂತಯ್ಯ, ಮೇಣಸಂದ್ರ, ತುಮಕೂರು ತಾಲ್ಲೂಕು ಹೆಸರಿಗೆ ನಿಲ್ಲಿಸಿ ವರ್ಗಾವಣೆ ಆದೇಶ ನೀಡಿರುತ್ತೇನೆ. ಸಹಕಾರ ಸಂಘಗಳ ಕಾಯಿದೆ ಅನ್ವಯ ನಮೂನೆ 8 ರ ನಿಗಧಿತ ನಮೂನೆಯಲ್ಲಿ ಸ್ಥಿರ ಸ್ವತ್ತುಗಳ ವರ್ಗಾವಣೆ ಪತ್ರವನ್ನು ಅಲಾಯಿದೆ ನೀಡಲಾಗಿರುವುದನ್ನು ಈ ಆದೇಶಕ್ಕೆ ಲಗತ್ತಿಸಿದೆ.

ಈ ಕಛೇರಿಯ ಮೊಹರ್ ಹಾಗೂ ನನ್ನ ಸ್ವಹಸ್ತಾಕ್ಷರದೊಂದಿಗೆ ದಿನಾಂಕ 15–11–2005 ರಂದು ಪುನರ್ ಆದೇಶ ನೀಡಲಾಗಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ತುಮಕೂರು ಉಪವಿಭಾಗ, ತುಮಕೂರು

**ನಮೂನೆ – 8**

**ಕರ್ನಾಟಕ ಸಹಕಾರ ಸಂಘಗಳ ನಿಯಮ/1960/88ಎ ರೀತ್ಯ**

**ಕರ್ನಾಟಕ ಸಹಕಾರ ಸಮಘಗಳ ಕಾಯ್ದೆ 1959 ರ ಕಲಂ 101 ರ ಅನ್ವಯ ಬಾಕಿಯ ಬಗ್ಗೆ.**

**ಸ್ಥಿರ ಸ್ವತ್ತುಗಳ ವರ್ಗಾವಣೆ ಪ್ರಮಾಣ ಪತ್ರ**

ತುಮಕೂರು ಜಿಲ್ಲೆ ತುಮಕೂರು ತಾಲ್ಲೂಕು, ಮೇಣಸಂದ್ರ ಗ್ರಾಮದ ವಾಸಿ ಶ್ರೀ ಚಿಕ್ಕೇಗೌಡ ಬಿನ್ ಹನುಮಂತಯ್ಯ ಉರುಫ್ ಪಾಪಣ್ಣ ಮತ್ತು ಶ್ರೀ ಕೆಂಪೇಗೌಡ ಬಿನ್ ಹನುಮಂತಯ್ಯ, ಇವರ ಸ್ಥರಾಸ್ತಿಗಳನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 71 (ರನ್ವಯ) ಆದೇಶವನ್ನು ಜಾರಿ ಮಾಡಿದ್ದರಿಂದ ಸದರಿಯವರ ಸ್ಥಿರ ಸ್ವತ್ತುಗಳನ್ನು ದಿನಾಂಕ 13–02–2002 ರ ಈ ಕಛೇರಿ ಆದೇಶದ ಅಡಿಯಲ್ಲಿ, ತಾಲ್ಲೂಕು ಪ್ರಾಥಮಿಕ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ., ತುಮಕೂರು ಇವರಿಗೆ ವರ್ಗಾಯಿಸಿದ್ದು ಸದರಿ ಸಾಲಗಾರರಿಂದ ಬ್ಯಾಂಕಿಗೆ ಬರಬೇಕಾಗಿದ್ದ ಪೂರ ಹಣ ಸಂದಾಯವಾಗಿದ್ದು, ಸದರಿ ಸ್ಥಿರಾಸ್ತಿಗಳನ್ನು ಮೂಲ ಹಕ್ಕುದಾರರಿಗೆ ಪುನರ್ ವರ್ಗಾಯಿಸುವಂತೆ ಬ್ಯಾಂಕಿನ ಕೋರಿಕೆ ಮೇರೆಗೆ ಈ ಕೆಳಕಂಡ ಸ್ಥಿರಾಸ್ತಿಗಳ ಹಕ್ಕು, ಅಧಿಕಾರ, ನಾಮ ಮತ್ತು ಬಾಧ್ಯತೆ ಶ್ರೀ ಚಿಕ್ಕೇಗೌಡ ಬಿನ್ ಹನುಮಂತಯ್ಯ ಉರುಫ್ ಪಾಪಣ್ಣ ಮತ್ತು ಶ್ರೀ ಕೆಂಪೇಗೌಡ ಬಿನ್ ಹನುಮಂತಯ್ಯ, ಮೇಣಸಂದ್ರ, ತುಮಕೂರು ತಾಲ್ಲೂಕು ಇವರಿಗೆ ನಿರ್ದಿಷ್ಟವಾಗಿರತಕ್ಕದ್ದೆಂದು ಮತ್ತು ಈ ಆದೇಶಕ್ಕೆ ಸೇರಿಸಲ್ಪಟ್ಟು ಅದಿಸೂಚನೆಯಲ್ಲಿ ವಿಧಿಸಲಾದ ಷರತ್ತುಗಳಿಗೆ ಮತ್ತು ನಿಯಮಾವಳಿಗಳಿಗೆ

ಒಳಪಟ್ಟು ಶ್ರೀ ಚಿಕ್ಕೇಗೌಡ ಬಿನ್ ಹನುಮಂತಯ್ಯ ಉರುಫ್ ಪಾಪಣ್ಣ ಮತ್ತು ಶ್ರೀ ಕೆಂಪೇಗೌಡ ಬಿನ್ ಹುನುಮಂತಯ್ಯ, ಮೇಣಸಂದ್ರ ಗ್ರಾಮ ತುಮಕೂರು ತಾಲ್ಲೂಕು ಇವರಿಗೆ ಒಪ್ಪಿಸತಕ್ಕದೆಂದು ಅದಿನಿಯಮ 101 ಪ್ರಕಾರದ ಅನ್ವಯ ಈ ಮೇಲಿನ ಆದೇಶ ನೀಡಲಾಗಿದೆ.

**ಸ್ವತ್ತುಗಳ ವಿವರ**

| ಸರ್ವೆ ನಂ. | ಗ್ರಾಮ | ವಿಸ್ತೀರ್ಣ | ತರಹೆ | ಹಕ್ಕುದಾರರ ವಿವರ |
|---|---|---|---|---|
| 5/210 | ಕರಡಿಗೆರೆ ಕಾವಲ್ | 4–00 | ಖುಷ್ಕಿ | ಚಿಕ್ಕೇಗೌಡ ಬಿನ್ ಹನುಮಂತಯ್ಯ ಉರುಫ್ ಪಾಪಣ್ಣ ಮೇಣಸಂದ್ರ, ತುಮಕೂರು ತಾಲ್ಲೂಕು |
| 5/212 | – "– | 1–00 | ಖುಷ್ಕಿ | do |
| 5/211 | – "– | 2–00 | ಖುಷ್ಕಿ | do |
| 31/1 | ಕರಡಿಗೆರೆ | 0–28 | ತರಿ | ಚಿಕ್ಕೇಗೌಡ ಬಿನ್ ಹನುಮಂತಯ್ಯ ಉರುಫ್ ಪಾಪಣ್ಣ ಮೇಣಸಂದ್ರ, ತುಮಕೂರು ತಾಲ್ಲೂಕು |
| 31/2 | – "– | 0–12 | ತರಿ | do |
| 10/2 | ಮೇಣಸಂದ್ರ | 1–03 | ಬಾಗಾಯ್ತು | ಶ್ರೀ ಕೆಂಪೇಗೌಡ ಬಿನ್ ಹನುಮಂತಯ್ಯ ಮೇಣಸಂದ್ರ, ತುಮಕೂರು ತಾಲ್ಲೂಕು |
| 74/5 | – "– | 0–26 | ಖುಷ್ಕಿ | do |
| 73/6 | – "– | 0–20 | ಖುಷ್ಕಿ | do |

**ಷರತ್ತು ಮತ್ತು ನಿಯಮಾವಳಿಗಳು:**

1. ಶ್ರೀ ಚಿಕ್ಕೇಗೌಡ ಬಿನ್ ಹನುಮಂತಯ್ಯ ಉರುಫ್ ಪಾಪಣ್ಣ ಮತ್ತು ಶ್ರೀ ಕೆಂಪೇಗೌಡ ಬಿನ್ ಹನುಮಂತಯ್ಯ ಮೇಣಸಂದ್ರ, ತುಮಕೂರು ತಾಲ್ಲೂಕು ವರ್ಗಾವಣೆ ಮಾಡುವ ಸ್ವತ್ತುಗಳನ್ನು ಇವರೇ ಉಪಯೋಗಿಸತಕ್ಕದ್ದು
2. ಪುನಃ ಮಾರಾಟ ಮಾಡುವ ಹಕ್ಕು ಇವರು ಹೊಂದಿರುತ್ತಾರೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ಪಿ.ಆರ್. 1802 ತುಮಕೂರು ಉಪವಿಭಾಗ, ತುಮಕೂರು

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ

### ಅಧಿಸೂಚನೆ ಸಂಖ್ಯೆ: ಸಿಆಸುಇ 26 ಹೆಚ್‌ಹೆಚ್‌ಎಲ್ 2005, ದಿನಾಂಕ: 9ನೇ ನವೆಂಬರ್ 2005

ಮಾನ್ಯ ಮಾಜಿ ರಾಷ್ಟ್ರಪತಿಗಳಾದ ಶ್ರೀ ಕೆ.ಆರ್. ನಾರಾಯಣನ್‌ರವರು ದಿನಾಂಕ: 09.11.2005 ರಂದು ನವದೆಹಲಿಯಲ್ಲಿ ನಿಧನರಾದ ವಿಷಯವನ್ನು ರಾಜ್ಯ ಸರ್ಕಾರವು ತೀವ್ರ ಸಂತಾಪದಿಂದ ಈ ಮೂಲಕ ಪ್ರಕಟಿಸಿದೆ. ದಿವಂಗತರ ಗೌರವಾರ್ಥ ದಿನಾಂಕ: 9.11.2005 ರಿಂದ 15.11.2005 ರವರೆಗೆ ಏಳು ದಿನಗಳ ಕಾಲ ರಾಜ್ಯಾದ್ಯಂತ ಶೋಕವನ್ನು ಆಚರಿಸಲಾಗುವುದು. ಈ ಅವಧಿಯಲ್ಲಿ ಯಾವುದೇ ಸಾರ್ವಜನಿಕ ಮನರಂಜನಾ ಕಾರ್ಯಕ್ರಮಗಳು ಇರುವುದಿಲ್ಲ. ನಿಯತವಾಗಿ ಹಾರಿಸಲಾಗುವ ಸರ್ಕಾರದ ಎಲ್ಲಾ ಕಟ್ಟಡಗಳ ಮೇಲೆ ರಾಷ್ಟ್ರಧ್ವಜವನ್ನು ಅರ್ಧಮಟ್ಟದಲ್ಲಿ ಹಾರಿಸಲಾಗುವುದು.

**ಎನ್. ರಾಮಕೃಷ್ಣ**
ಪಿ.ಆರ್. 1807 ಸರ್ಕಾರದ ಉಪ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ರಾಜ್ಯ ಶಿಷ್ಟಾಚಾರ).

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಕೋಲಾರ ಜಿಲ್ಲೆ, ಕೋಲಾರ

### ಅಧಿಸೂಚನೆ

### ಸಂಖ್ಯೆ: ಎಲ್‌ಆರ್‌ಎಫ್ (ಕಲಂ 109) ಸಿಆರ್ 01:2005-06, ದಿನಾಂಕ: 14ನೇ ನವೆಂಬರ್ 2005

ಕೋಲಾರ ತಾಲ್ಲೂಕು, ಹುತ್ತೂರು ಹೋಬಳಿ ಹರಟಿ ಗ್ರಾಮದ ಸ.ನಂ.249/1ರ ಪೈಕಿ 0-05 ಗುಂಟೆ ಜಮೀನನ್ನು ಆಧ್ಯಾತ್ಮಿಕ ಆಶ್ರಮವನ್ನು ಸ್ಥಾಪಿಸುವ ಸಲುವಾಗಿ ದಾನವಾಗಿ ಪಡೆಯಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109(1) ರಡಿಯಲ್ಲಿ ಅನುಮತಿಯನ್ನು ನೀಡಲು ಕೋ ಅದ್ಯಕ್ಷರು, ಶ್ರೀ ಯೋಗಿ ನಾರಾಯಣ ಸ್ವಾಮಿ ಸೇವಾ ಅಭಿವೃದ್ಧಿ ಟ್ರಸ್ಟ್ ಹರಟಿ ಮತ್ತು ಮಲ್ಲಾಂಡಹಳ್ಳಿ ಕೋಲಾರ ತಾಲ್ಲೂಕು ರವರು ನಮೂನೆ 15ಎ ರಲ್ಲಿ ಅಗತ್ಯ ದಾಖಲೆಗಳೊಂದಿಗೆ ಅರ್ಜಿಯನ್ನು ಸಲ್ಲಿಸಿದ್ದು ಇದರಂತೆ ತಹಶೀಲ್ದಾರ್ ಕೋಲಾರ ತಾಲ್ಲೂಕು ರವರು ನಂ. ಎಲ್‌ಆರ್‌ಎಫ್.ಸಿಆರ್ 42/ 2005-06, ದಿನಾಂಕ: 23.8.2005 ರಂತೆ ಕಡತ ತಯಾರಿಸಿ ಸಲ್ಲಿಸಿರುವ ಪ್ರಸ್ತಾವನೆಯನ್ನು ಸಹಾಯಕ ಕಮೀಷನರ್ ಕೋಲಾರ ಉಪ ವಿಭಾಗ ರವರು ಪರಿಶೀಲಿಸಿ ಮೇಲ್ಕಂಡ ಜಮೀನನ್ನು ದಾನವಾಗಿ ಪಡೆಯಲು ಅರ್ಜಿದಾರರಿಗೆ ಅನುಮತಿಯನ್ನು ನೀಡಲು ಪತ್ರ ನಂ. ಎಲ್‌ಆರ್‌ಎಫ್.ಸಿಆರ್ 10/ 2005-06 ದಿನಾಂಕ: 27.9.2005 ರಂತೆ ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿರುತ್ತೆ. ಕೋಲಾರ ತಾಲ್ಲೂಕು ಹುತ್ತೂರು ಹೋಬಳಿ ಹರಟಿ ಗ್ರಾಮದ ಸ.ನಂ.249/1ರ ಜಮೀನಿನ ಖಾತೆ ಶ್ರೀ ವೈ. ಗೋವಿಂದಪ್ಪ ಎಂಬುವವರ ಹೆಸರಿನಲ್ಲಿರುತ್ತೆ. ಈ ಜಮೀನು ಸದರಿಯವರಿಗೆ ವಿಭಾಗ ಮೂಲಕ ಬಂದಿರುತ್ತೆ. ಸದರಿ ಜಮೀನನ್ನು ಮೇಲ್ಕಂಡ ಗೋವಿಂದಪ್ಪನವರು ಅರ್ಜಿದಾರರಿಗೆ ದಾನಕ್ಕೆ ನೀಡಲು ಒಪ್ಪಿ ದಿನಾಂಕ: 13.4.2005 ರಂದು ದಾನದ ಕರಾರು ಪತ್ರವನ್ನು ಬರೆಸಿಕೊಟ್ಟಿರುತ್ತಾರೆ. ಪ್ರಸ್ತಾಪಿತ ಜಮೀನು ಹಿಡುವಳಿ ಜಮೀನಾಗಿರುತ್ತೆ. ಸದರಿ ಜಮೀನು ಭೂ ಮಂಜೂರಾತಿ ನಿಯಮಗಳಿಗೆ, ಭೂ ಸುಧಾರಣೆ ಕಾಯ್ದೆ, ಇನಾಂ ರದ್ದಿಯಾತಿ ಕಾಯಿದೆ ಮತ್ತು ಪಿಟಿಸಿಎಲ್ ಕಾಯಿದೆಯ ವ್ಯಾಪ್ತಿಗೆ ಒಳಪಟ್ಟಿರುವುದಿಲ್ಲ. ಈ ಜಮೀನಿಗೆ ಸಂಬಂಧಿಸಿದಂತೆ ಯಾರೂ ಗೇಣಿ ಅರ್ಜಿಯನ್ನು ಸಲ್ಲಿಸಿರುವುದಿಲ್ಲ.

ಅಧ್ಯಕ್ಷರು, ಶ್ರೀ ಯೋಗಿ ನಾರಾಯಣ ಸ್ವಾಮಿ ಸೇವಾ ಅಭಿವೃದ್ಧಿ ಟ್ರಸ್ಟ್ ಹರಟಿ ಕೋಲಾರ ತಾಲ್ಲೂಕು ಈ ಟ್ರಸ್ಟ್ ಹಿರಿಯ ಉಪ ನೋಂದಣಾಧಿಕಾರಿಗಳು ಕೋಲಾರ ಅವರ ಕಛೇರಿಯಲ್ಲಿ ನಂ.52/2004-05, ದಿನಾಂಕ: 19.1.2005 ರಂತೆ ನೋಂದಾವಣೆಯಾಗಿರುತ್ತೆ. ಅರ್ಜಿದಾರರು

ಪ್ರಸ್ತಾಪಿತ ಜಮೀನನ್ನು ಆಧ್ಯಾತ್ಮಿಕ ಆಶ್ರಮವನ್ನು ಸ್ಥಾಪಿಸಲು ದಾನವಾಗಿ ಪಡೆಯಲು ಉದ್ದೇಶಿಸಿದ್ದು ಈ ಸಂಬಂಧ ನಕ್ಷೆ ಮತ್ತು ಇತರೆ ದಾಖಲೆಗಳನ್ನು ಹಾಜರುಪಡಿಸಿರುತ್ತಾರೆ.

ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (1ಎ) ರಂತೆ ಕಲಂ (1) ರಲ್ಲಿ ವಿವರಿಸಿರುವ ಉದ್ದೇಶಗಳನ್ನು ಹೊರತುಪಡಿಸಿ ಅನ್ಯ ಉದ್ದೇಶಗಳಿಗಾಗಿ ಜಮೀನನ್ನು ಹೊಂದಲು ಅವಕಾಶವನ್ನು ಕಲ್ಪಿಸಿದ್ದು ಸರ್ಕಾರಿ ಅಧಿಸೂಚನೆ ಸಂಖ್ಯೆ: ಸಂವ್ಯಶಾಇ 67 ಶಾಸನ 2003, ಬೆಂಗಳೂರು ದಿನಾಂಕ: 10.03.2004 ರಂತೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (1ಎ) ತಿದ್ದುಪಡಿಯನ್ನು ತಂದಿರುತ್ತೆ. ಇದರಂತೆ ಕಲಂ 109 (1ಎ) ಅಡಿಯಲ್ಲಿ ಅರ್ಧ ಹೆಕ್ಟೇರ್‌ಗೆ ಮೀರದಷ್ಟು ಜಮೀನನ್ನು ಕ್ರಯಕ್ಕೆ ಪಡೆಯಲು / ದಾನವಾಗಿ ಪಡೆಯಲು ಅನುಮತಿ/ವಿನಾಯ್ತಿಯನ್ನು ನೀಡುವ ಅಧಿಕಾರವನ್ನು ಜಿಲ್ಲಾಧಿಕಾರಿಗಳಿಗೆ ನೀಡಿರುತ್ತೆ. ಇದರಂತೆ ಈ ಪ್ರಸ್ತಾವನೆಯು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (1ಎ)ಗೆ ಅನುಗುಣವಾಗಿರುವುದರಿಂದ ಕೋಲಾರ ತಾಲ್ಲೂಕು ಹುತ್ತೂರು ಹೋಬಳಿ ಹರಟಿ ಗ್ರಾಮದ ಸ.ನಂ.249/1ರ ಪೈಕಿ 0-05 ಗುಂಟೆ ಜಮೀನನ್ನು ಆಧ್ಯಾತ್ಮಿಕ ಆಶ್ರಮ ಸ್ಥಾಪನೆಗಾಗಿ ದಾನವಾಗಿ ಪಡೆಯಲು ಅಧ್ಯಕ್ಷರು, ಶ್ರೀ ಯೋಗಿ ನಾರಾಯಣ ಸ್ವಾಮಿ ಸೇವಾ ಅಭಿವೃದ್ಧಿ ಟ್ರಸ್ಟ್ ಹರಟಿ ಮತ್ತು ಮಲ್ಲಾಂಡಹಳ್ಳಿ ಕೋಲಾರ ತಾಲ್ಲೂಕು ರವರಿಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (1ಎ)ರ ಅಡಿಯಲ್ಲಿ ಅನುಮತಿಯನ್ನು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ನೀಡಲಾಗಿದೆ.

**ಷರತ್ತುಗಳು:**

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಕ್ರಯಕ್ಕೆ ಪಡೆಯಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು 2 ವರ್ಷಗಳೊಳಗಾಗಿ ಉಪಯೋಗಿಸತಕ್ಕದ್ದು ಹಾಗೂ ಈ ಬಗ್ಗೆ ಲಿಖಿತ ಮೂಲಕ ಮಾಹಿತಿಯನ್ನು ಈ ಕಛೇರಿಗೆ ನೀಡತಕ್ಕದ್ದು.
2. ವಿನಾಯಿತಿ : ಅನುಮತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ 1956ರ ಕಲಂ 3 ರಲ್ಲಿ ಹೇಳಿರುವಂತೆ ಶೇಕಡ 55 ಪೆಯಿಡ್ ಅಫ್ ಷೇರ್ ಬಂಡವಾಳ ಹೊಂದಿದ ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರದ ಅಥವಾ ರಾಜ್ಯ ನಿಯಂತ್ರಿತ ಅಥವಾ ಎರಡರ ಹಿಡಿತ ಹೊಂದಿರುವ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಾಗಿ ಅಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
3. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯ್ದೆ 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ (ಸಕ್ಷಮ ಪ್ರಾಧಿಕಾರದಿಂದ) ಅನುಮತಿ ಪಡೆಯಬೇಕು.
4. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿ.ಡಿ.ಪಿ. : ಓಡಿಪಿ ಗ್ರಾಮ ಪಂಚಾಯಿತಿಯ ವ್ಯಾಪ್ತಿಯ ಒಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.
5. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾಗಿರುವ ಅನುಮತಿಯನ್ನು ಕಾನೂನು ರೀತ್ಯಾ ರದ್ದುಪಡಿಸಲಾಗುವುದು. ಮತ್ತು ಪ್ರಸ್ತಾಪಿತ ಜಮೀನನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಿಕೊಳ್ಳಲಾಗುವುದು.
6. ಈ ಅನುಮತಿಯು ಭೂ ಸುಧಾರಣಾ ಕಾಯ್ದೆ 1961ರ ಕಲಂ 109 (1ಎ) ರನ್ವಯ ಮಾತ್ರವಾಗಿರುತ್ತದೆ. ಬೇರೆ ಕಾನೂನುಗಳ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

ಪಿ.ಆರ್. 1808 ಜಿಲ್ಲಾಧಿಕಾರಿಗಳು, ಕೋಲಾರ ಜಿಲ್ಲೆ, ಕೋಲಾರ.

## ಸಹಕಾರ ಸಂಘಗಳ ಉಪ ನಿಬಂಧಕರ ಕಛೇರಿ, ಬೀದರ್ ಜಿಲ್ಲೆ, ಬೀದರ್

**ವಿಷಯ :** ಸ್ಥಗಿತಗೊಂಡ **ಹಾಲು ಉತ್ಪಾದಕರ ಸಹಕಾರ ಸಂಘ ನಿ, ಅಮಿರಾಬಾದವಾಡಿ ತಾ: ಹುಮನಾಬಾದ** ಇದನ್ನು ಸಹಕಾರ ಕಾಯ್ದೆ 1959ರ ಕಲಂ 72(2) ರನ್ವಯ ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ :** 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೀದರ್ ಉಪ ವಿಭಾಗ, ಬೀದರ್ ಇವರ ಪತ್ರ ಸಂಖ್ಯೆ: ಸನಿಬಿ1/ವಿ6/ಸಮಾಪನೆ/ಸಿಆರ್-/2005-2006, ದಿನಾಂಕ: 30.09.2005.

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೀದರ್ ರವರು ನೋಂದಣಿ ಸಂಖ್ಯೆ: ಎಆರ್1/ಡಿಆರ್‌ಬಿ/ಆರ್‌ಜಿಎಸ್/23264/1997-98, ದಿನಾಂಕ: ರಲ್ಲಿ ನೋಂದಣಿ **ಹಾಲು ಉತ್ಪಾದಕರ ಸಹಕಾರ ಸಂಘ ನಿ, ಅಮಿರಾಬಾದವಾಡಿ ತಾ: ಹುಮನಾಬಾದ** ಈ ಸಂಘವು ಸುಮಾರು .... ವರ್ಷಗಳಿಂದ ತನ್ನ ಕಾರ್ಯಚಟುವಟಿಕೆಗಳನ್ನು ನಡೆಸದೆ ಸಂಪೂರ್ಣವಾಗಿ ಸ್ಥಗಿತಗೊಂಡಿರುತ್ತದೆ. ಆದ್ದರಿಂದ ಇದನ್ನು ಸಮಾಪನೆ ಗೊಳಿಸಲು ಉಲ್ಲೇಖ (1)ರ ಮುಖೇನ ಶಿಫಾರಸ್ಸು ಮಾಡಿರುತ್ತಾರೆ. ಹಾಗೂ ಸದರಿ ಸಂಘದ ಸದಸ್ಯರಿಗೆ ಸಂಘದ ಪುನಃಶ್ಚೇತನಗೊಳಿಸಲು ಆಸಕ್ತಿ ಇರುವುದಿಲ್ಲ ಹಾಗೂ ಸಂಘದ ಸಮಾಪನೆ ಬಗ್ಗೆ ಯಾರಿಂದಲೂ ಯಾವುದೆ ತರಹದ ಆಕ್ಷೇಪಣೆ ಬಂದಿರುವುದಿಲ್ಲವೆಂದು ವರದಿ ಮಾಡಿರುತ್ತಾರೆ. ಪ್ರಯುಕ್ತ ಈ ಸಂಘವನ್ನು ಇದೇ ರೀತಿ ಮುಂದುವರೆಯಲು ಬಿಟ್ಟಲ್ಲಿ ಇನ್ನಷ್ಟು ಸಂಘದ ಸ್ಥಿತಿ ಹದಗೆಡುವ ಸಂಭವವಿರುವುದರಿಂದ ಮತ್ತು ಸದಸ್ಯರಿಗೆ ಯಾವುದೇ ರೀತಿಯ ಪ್ರಯೋಜನೆ ಇಲ್ಲವೆಂದು ಮನಗಂಡು ಸಹಾಯಕ ನಿಬಂಧಕರು, ಬೀದರ್ ರವರು ಇದನ್ನು ಸಮಾಪನೆಗೊಳಿಸಲು ಶಿಫಾರಸ್ಸು ಮಾಡಿರುವುದರಿಂದ, ಮತ್ತು ಇದನ್ನು ಪುನಃಶ್ಚೇತನಗೊಳಿಸುವಲ್ಲಿ ಸದಸ್ಯರಲ್ಲಿ ಆಸಕ್ತಿ ಕಂಡು ಬಂದಿಲ್ಲವಾದ್ದರಿಂದ ಸದರಿ ಸಂಘವನ್ನು ಸಮಾಪನೆಗೊಳಿಸುವುದು ಸೂಕ್ತವೆಂದು ಮನಗಂಡು ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಉನಿಬಿ/ವಿ2/ಸಮಾಪನೆ/ಸಿಆರ್/2005-06/3050, ದಿನಾಂಕ: 14ನೇ/15ನೇ ನವೆಂಬರ್ 2005**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಗಣಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2) ರನ್ವಯ ಹಾಗೂ ಸರ್ಕಾರಿ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯು/69/ಸಿಎಲ್ಎಂ/200, ದಿನಾಂಕ: 21.11.2001ರ ಪ್ರಕಾರ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ **ಎಂ.ಡಿ.ಮಠಪತಿ** ಸಹಕಾರ ಸಂಘಗಳ ಉಪ ನಿಬಂಧಕರು, ಬೀದರ್ ಜಿಲ್ಲೆ, ಬೀದರ್ ಆದ ನಾನು ಸ್ಥಗಿತಗೊಂಡ **ಹಾಲು ಉತ್ಪಾದಕರ ಸಹಕಾರ ಸಂಘ ನಿ, ಅಮಿರಾಬಾದವಾಡಿ ತಾ: ಹುಮನಾಬಾದ** ಇದನ್ನು ಸಮಾಪನೆಗೊಳಿಸಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 73(1) ರನ್ವಯ

